# ಇತಿಹಾಸ ಪುರಾಣಗಳಲ್ಲಿ ಸ್ತ್ರೀಧರ್ಮಗಳು

(ಸ್ತ್ರೀ ಜಪಕ್ರಮ, ದಾಸಸಾಹಿತ್ಯಕೃತಿಗಳ ಸಹಿತ)




ಸಂಪಾದಕರು

ಶ್ರೀನಿವಾಸ ಸು. ಮಠದ



ಗೀತಾಪ್ರಕಾಶನ ಅಜರೇಕರ ಚಾಳ, ವಿಜಾಪುರ.

# ಇದೇ ಲೇಖಕರ ಪ್ರಕಟಿತ ಕೃತಿಗಳು

| | | |
|---|---|---|
| 1) | ಶ್ರೀಮಜ್ಜಯತೀರ್ಥ ಸುಪ್ರಭಾತ | 00-60 |
| 2) | ಶ್ರೀ ಸಪ್ತರ್ಷಿರಾಮಾಯಣ ಹಾಗೂ ಶ್ರೀರಾಮ ವೇದಪಾದ ಸ್ತೋತ್ರ (ತೃತೀಯ ಮುದ್ರಣ) | 5-00 |
| 3) | ದಾಸ ಸಾಹಿತ್ಯ ಸೌರಭ (ಸಂಪುಟ-1) | 18-00 |
| 4) | ಉಪನೀತರಿಗೆ ಉಪಯುಕ್ತ ಉಪದೇಶ (ದ್ವಿತೀಯ ಮುದ್ರಣ) | 30-00 |
| 5) | ಶ್ರೀ ಸಂಧ್ಯಾಸಾರ ಸಂಗ್ರಹ (ಚತುರ್ಥ ಮುದ್ರಣ) | 20-00 |
| 6) | ಶ್ರೀರುಕ್ಮಿಣೀಶವಿಜಯ ಸಾರಸಂಗ್ರಹ (ಸೈದ್ಧಾಂತಿಕ ಅಧ್ಯಯನ) | 20-00 |
| 7) | ಶ್ರೀ ದೇವಪೂಜಾ ಸಾರಸಂಗ್ರಹ (ಪಂಚಮ ಮುದ್ರಣ) | 20-00 |
| 8) | ಸದಾಚಾರ ಸೌರಭ (ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ ಉಜಿರೆ ಅವರಿಂದ ಪ್ರಕಟಿತ) | 25-00 |
| 9) | ಶ್ರೀವಿಷ್ಣುಸಹಸ್ರನಾಮಸ್ತೋತ್ರಮ್ (ಕನ್ನಡಾನುವಾದ) (ಶ್ರೀ ಶ್ರೀ ಸತ್ಯಸಂಧತೀರ್ಥರ ಭಾಷ್ಯಾನುಸಾರಿ) (ಷಷ್ಠ ಮುದ್ರಣ) | 25-00 |
| 10) | ಶ್ರೀ ವೈಶ್ವದೇವಸಾರಸಂಗ್ರಹ (ತೃತೀಯ ಮುದ್ರಣ) | 20-00 |
| 11) | ದಾಸ ಸಾಹಿತ್ಯ ಸೌರಭ (ಸಂಪುಟ-2) | 20-00 |
| 12) | ಶ್ರೀಕೃಷ್ಣಾವತಾರ ಸಂದೇಶ | 25-00 |
| 13) | ಶ್ರೀ ಅಣುಭಾಷ್ಯ ಸಾರಸಂಗ್ರಹ (ಕನ್ನಡಾನುವಾದ) (ಶ್ರೀ ಬಿದರಹಳ್ಳಿ ಶ್ರೀನಿವಾಸತೀರ್ಥರ ಟಿಪ್ಪಣಿ) | 25-00 |
| 14) | ವೇದ ಬ್ರಹ್ಮ ಸೂತ್ರಗಳು ಇತ್ಯಾದಿ (ಆನಂದತೀರ್ಥ ಪ್ರತಿಷ್ಠಾನ, ಬೆಂಗಳೂರು ಪ್ರಕಟಿತ) | 50-00 |
| 15) | ಗಜೇಂದ್ರಮೋಕ್ಷ (ಒಂದು ಅಧ್ಯಯನ) | 30-00 |
| 16) | ದಶಾವತಾರ ಸ್ತೋತ್ರಮಂಜರೀ (ಎಸ್.ಎಮ್.ಎಸ್.ಓ.ಸಭಾ ಪ್ರಕಟಿತ) | 30-00 |
| 17) | ಮಧ್ವಾಷ್ಟಕಮ್ (ವಿವರಣೆ ಸಹಿತ) | 10-00 |
| 18) | ಗೀತೆಯ ಅಂತರಂಗ | 20-00 |
| 19) | ಧಾತ್ರೀಮಹಿಮೆ, ಧಾತ್ರೀಹೋಮ ಹಾಗೂ ವನಭೋಜನ ಮಹಾತ್ಮೆ | 10-00 |
| 20) | ತೀರ್ಥಪ್ರಬಂಧ : ಒಂದು ಅಧ್ಯಯನ | 20-00 |
| 21) | ಶ್ರೀನರಸಿಂಹಸ್ತೋತ್ರಮಂಜರೀ (ತೃತೀಯ ಮುದ್ರಣ) (ಅಪೂರ್ವ ಸ್ತೋತ್ರಸಂಗ್ರಹ) | 30-00 |
| 22) | ಪ್ರಾತಃ ಸ್ತೋತ್ರಗಳು (ಕನ್ನಡ ಭಾವಾನುವಾದ ಸಹಿತ) | 15-00 |
| 23) | ಸಮುದ್ರ ಮಥನ - ಒಂದು ಅಧ್ಯಯನ | 30-00 |
| 24) | ಶ್ರೀ ರುಕ್ಮಿಣೀಶ ವಿಜಯಃ (ಕನ್ನಡ ಕಥಾರೂಪ) | 15-00 |
| 25) | ಶ್ರೀವೇದವ್ಯಾಸ ಸ್ತೋತ್ರಮಂಜರೀ (ಹರಿದಾಸರ ಕೃತಿಗಳ ಸಹಿತ) | 20-00 |
| 26) | ಶ್ರೀನವಗ್ರಹ ಸ್ತೋತ್ರ ಮಂಜರೀ | 15-00 |

ಶ್ರೀ

ಈ ಗ್ರಂಥವನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

# ಇತಿಹಾಸ ಪುರಾಣಗಳಲ್ಲಿ ಸ್ತ್ರೀಧರ್ಮಗಳು

(ಸ್ತ್ರೀಜಪಕ್ರಮ, ದಾಸಸಾಹಿತ್ಯಕೃತಿಗಳ ಸಹಿತ)

ಸಂಪಾದಕರು
ಶ್ರೀನಿವಾಸ ಸು. ಮಠದ

ಗೀತಾಪ್ರಕಾಶನ ಅಜರೇಕರ ಚಾಳ, ವಿಜಾಪುರ.

# ಆಶೀರ್ವಚನ

## ಶ್ರೀಗೋವಿಂದರಾಜೋ ವಿಜಯತೇ

ಸದಾಚಾರಧರ್ಮಗಳನ್ನು ಸ್ತ್ರೀ ಪುರುಷರಿಬ್ಬರೂ ಸರಿಯಾಗಿ ತಿಳಿದು ಆಚರಿಸಬೇಕು. ಪುರುಷರು ಆಚರಿಸಬೇಕಾದ ಧರ್ಮಗಳ ಕುರಿತು ನಮ್ಮ ಪ್ರಿಯಶಿಷ್ಯ ಶ್ರೀನಿವಾಸ ಸು.ಮಠದನು ಸದಾಚಾರ ಸೌರಭ, ವಿವಾಹಿತರಿಗೆ ವಿಹಿತ ಉಪದೇಶ ಇತ್ಯಾದಿ ಕೃತಿಗಳಲ್ಲಿ ಚೆನ್ನಾಗಿ ವಿವರಿಸಿದ್ದಾನೆ.

ಪ್ರಕೃತ ಸುಮಂಗಲೀ ಸ್ತ್ರೀಯರು ಹಾಗೂ ವಿಧವಾ ಸ್ತ್ರೀಯರು ಆಚರಿಸಬೇಕಾದ ಧರ್ಮಗಳನ್ನು ತಿಳಿಸಿಕೊಡಲು ಇತಿಹಾಸ, ಪುರಾಣ ಮನುಸ್ಮೃತಿಗಳಿಂದ ಪ್ರಮಾಣ ವಚನಗಳನ್ನು ಸಂಗ್ರಹಿಸಿ "ಇತಿಹಾಸ ಪುರಾಣಗಳಲ್ಲಿ ಸ್ತ್ರೀಧರ್ಮಗಳು" ಎಂಬ ಚಿಕ್ಕ ಕೃತಿಯನ್ನು ರಚನೆ ಮಾಡಿದ್ದಾನೆ. ಸಕಲ ಸಜ್ಜನರು ಈ ಕೃತಿಯನ್ನು ಓದಿ ಧರ್ಮಗಳನ್ನು ಸರಿಯಾಗಿ ಆಚರಿಸುವವರಾಗಿ ಭಗವಂತನ ಕೃಪೆಗೆ ಪಾತ್ರರಾಗಬೇಕು.

ಈ ಕೃತಿ ರಚನೆ ಮಾಡಿದ ಶ್ರೀನಿವಾಸ ಸು. ಮಠದನಿಗೆ ಶ್ರೀಹರಿವಾಯುಗಳು ಜ್ಞಾನ, ಭಕ್ತಿ ವೈರಾಗ್ಯಾದಿಗಳನ್ನು ಕರುಣಿಸಲಿ ಎಂಬುದಾಗಿ ಬಾದರಾಯಣಾಭಿನ್ನ ಶ್ರೀಗೋವಿಂದರಾಜರಲ್ಲಿ ಪ್ರಾರ್ಥಿಸುತ್ತೇವೆ.

ಸ್ಥಳ : ವಿಜಾಪೂರ
ದಿನಾಂಕ : 2–7–08.

ಪಂ॥ ತ್ರಿವಿಕ್ರಮಾಚಾರ್ಯ ಉಮರ್ಜಿ
ವಿಜಾಪೂರ.

**ITIHASA PURANAGALALLI STREE DHARMAGALU**
**By Srinivas. S. Mathad** B.Sc.,MA.

Recipient of "Parimala Prashasti" and " Jnanajyoti Award "

Ajarekar Chal
Meenaxi Chowk, Bijapur-586101
Mobile : 9972078061

First Edition : 2008

Copies : 1000

Pages : 42

Publisher : Geeta Prakashana
Ajarekar Chal,
Meenaxi Chowk,
BIJAPUR-586101.
☎ : 258362

---

ಶ್ರೀ ಪಂ।। ದಿವಂಗತ ಪ್ರಾಣನಾಥಾಚಾರ್ಯ ಗಲಗಲಿ ಅವರ ಸ್ಮರಣಾರ್ಥ ಅವರ ಧರ್ಮಪತ್ನಿ ಗಂ।। ಭಾ।। ಶ್ರೀಮತಿ ಭಾರತೀಬಾಯಿ ಗಲಗಲಿ ಸಾ।। ಸತ್ತಿ ಇವರು ಈ ಪುಸ್ತಕದ ಪ್ರಕಾಶನಕ್ಕೆ ವಿಶೇಷ ಧನಸಹಾಯನೀಡಿ ಜ್ಞಾನಕಾರ್ಯ ಮಾಡಿದ್ದಾರೆ. ಅವರಿಗೆ ಶ್ರೀಹರಿವಾಯುಗಳು ಜ್ಞಾನ,ಭಕ್ತಿ,ವೈರಾಗ್ಯಾದಿಗಳನ್ನು ಕರುಣಿಸಲಿ.ಹಾಗೂ ಶ್ರೀಬನಾಜಿಶ್ರೀನಿವಾಸಮೂರ್ತಿ ಬೆಂಗಳೂರು ಅವರು ತಮ್ಮ ಚಿ।।ದಿ।।ಕೇಶವನ ಸ್ಮರಣಾರ್ಥ ಧನಸಹಾಯ ನೀಡಿದ್ದಾರೆ. ಶ್ರೀಹರಿವಾಯುಗಳು ದಿ।।ಕೇಶವನಿಗೆ ಸದ್ಗತಿ ನೀಡಲಿ.

---

Printers :
*VIJAY OFFSET PRINTERS*
*Ajarekar Chal Meenaxi Chowk,*
*BIJAPUR-586101.*
*Ph : 251792*

# ವಿಷಯಾನುಕ್ರಮಣಿಕಾ

# ಭಾಗ-1

## ಶ್ರೀಮನ್‌ಮಹಾಭಾರತದಲ್ಲಿ ಸ್ತ್ರೀಧರ್ಮಗಳು-I

ಶ್ರೀಮನ್‌ಮಹಾಭಾರತದ ವನಪರ್ವದಲ್ಲಿ ಶ್ರೀವೇದವ್ಯಾಸರು, ಶ್ರೀಸತ್ಯಭಾಮಾದೇವಿಯರ ಹಾಗೂ ದ್ರೌಪದೀದೇವಿಯರ ಸಂವಾದದ ಮೂಲಕ ಪತಿವ್ರತಾ ಧರ್ಮಗಳನ್ನು ತಿಳಿಸಿಕೊಟ್ಟಿದ್ದಾರೆ. ದ್ರೌಪದೀದೇವಿಯರು ಸತ್ಯಭಾಮಾದೇವಿಯರನ್ನು ಕುರಿತು ಹೇಳುವ ಮಾತುಗಳು ಹೀಗಿವೆ.

ಗಂಡನಿಗೆ ಅಪ್ರಿಯವಾದ ಯಾವ ಕಾರ್ಯವನ್ನೂ ಹೆಂಡತಿಯು ಯಾವ ಕಾಲದಲ್ಲಿಯೂ ಮಾಡಬಾರದು[1].

ಅಹಂಕಾರ, ಕಾಮ,ಕ್ರೋಧಗಳನ್ನು ಯಾವಾಗಲೂ ಬಿಟ್ಟವಳಾಗಿ ನಾನು ಪಾಂಡವರನ್ನು, ಅವರ ಇತರ ಪತ್ನಿಯರನ್ನು ಉಪಚರಿಸುತ್ತೇನೆ.[2]

ನನ್ನ ಮನಸ್ಸಿನಲ್ಲಿರುವ ಅಪೇಕ್ಷೆಗಳನ್ನು ಸ್ಥಗಿತಗೊಳಿಸಿ ನನ್ನ ಮನಸ್ಸನ್ನು ಭಗವಂತನಲ್ಲಿಟ್ಟು, ಪತಿಶುಶ್ರೂಷಾನಿರತಳಾಗಿ, ಅಭಿಮಾನರಹಿತಳಾಗಿ, ನನ್ನ ಪತಿಗಳ ಮನಸ್ಸಿನ ಇಂಗಿತವನ್ನು ಅರಿತುಕೊಂಡು ಅವರ ಸೇವೆ ಮಾಡುತ್ತೇನೆ.[3]

ಪತಿಗಳೊಡನೆ ಕೆಟ್ಟ ಮಾತುಗಳನ್ನಾಗಲೀ, ಸುಳ್ಳು ಮಾತುಗಳನ್ನಾಗಲೀ ಆಡುವದಿಲ್ಲ.ಅವರಿಗೆ ಸಂಶಯ ಉಂಟಾಗುವ ರೀತಿಯಲ್ಲಿ ಇನ್ನೊಬ್ಬರನ್ನು ನೋಡುವದಿಲ್ಲ. ಅವರ ಕಣ್ಣಸನ್ನೆಯಿಂದಲೇ ಅವರ ಮನಸ್ಸನ್ನು ತಿಳಿದುಕೊಂಡು ಅವರ ಸೇವೆ ಮಾಡುತ್ತೇನೆ.[4]

ಸರ್ವಾಲಂಕಾರಭೂಷಿತನಾದ ದೇವತೆ ಇರಲಿ, ಮನುಷ್ಯನಿರಲಿ, ಗಂಧರ್ವನಿರಲಿ, ಯುವಕನಿರಲಿ, ಸರ್ವೈಶ್ವರ್ಯ ಸಂಪನ್ನನಿರಲಿ, ಸೌಂದರ್ಯವಂತನಾಗಿರಲಿ, ಅವನು ಅನ್ಯಪುರುಷನೆಂದು ತಿಳಿದು ಆ ಕಡೆಗೆ ನನ್ನ ಮನಸ್ಸು ಹಾಕುವದಿಲ್ಲ.[5]

---

1. ನಜಾತು ವಿಪ್ರಿಯಂ ಭರ್ತುಃ ಸ್ತ್ರಿಯಾ ಕಾರ್ಯಂ ಕಥಂಚನ ॥ ವನಪರ್ವ
2. ಅಹಂಕಾರಂ ವಿಹಾಯ ಅಹಂ ಕಾಮಕ್ರೋಧೌ ಚ ಸರ್ವದಾ।
   ಸದಾರಾನ್ ಪಾಂಡವಾನ್ನಿತ್ಯಂ ಪ್ರಯತೋಪಚರಾಮ್ಯಹಮ್ ॥ ವನಪರ್ವ
3. ಪ್ರಣಯಂ ಪ್ರತಿಸಂಹೃತ್ಯ ನಿಧಾಯಾತ್ಮಾನಮಾತ್ಮನಿ ।
   ಶುಶ್ರೂಷುರ್ನಿರಹಂಮಾನಾ ಪತೀನಾಂ ಚಿತ್ತರಕ್ಷಿಣೀ ॥ ವನಪರ್ವ
4. ದುರ್ವ್ಯಾಹೃತಾತ್ ಶಂಕಮಾನಾ ದುಃಸ್ಥಿತಾದ್ದುರವೇಕ್ಷಿತಾತ್ ।
   ದುರಾಸಿತಾತ್ ದುರ್ವ್ರಜಿತಾತ್ ಇಂಗಿತಾಧ್ಯಾಸಿತಾದಪಿ ॥ ವನಪರ್ವ
5. ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ ।
   ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ ॥ ವನಪರ್ವ

ನನ್ನ ಪತಿಗಳು ಸ್ನಾನ ಮಾಡಿದ ನಂತರ ನಾನು ಸ್ನಾನ ಮಾಡುತ್ತೇನೆ. ಅವರು ಊಟ ಮಾಡಿದ ನಂತರ ನಾನು ಊಟ ಮಾಡುತ್ತೇನೆ. ಅವರು ಮಲಗಿದ ಮೇಲೆ ನಾನು ಮಲಗುತ್ತೇನೆ. ಅವರು ಏಳುವ ಮೊದಲು ನಾನು ಏಳುತ್ತೇನೆ.[6]

ಬೇರೆ ಕ್ಷೇತ್ರಗಳಿಂದಾಗಲೀ, ಅರಣ್ಯದಿಂದಾಗಲೀ, ಗ್ರಾಮಾಂತರದಿಂದಾಗಲೀ, ನನ್ನ ಪತಿಯು ಮನೆಗೆ ಆಗಮಿಸಿದಾಗ ಎದ್ದು ಹೋಗಿ ಮುಗುಳ್ನಗೆಯಿಂದ ಸ್ವಾಗತಿಸಿ ಆಸನವಿತ್ತು, ಕಾಲು ತೊಳೆಯಲು, ಕುಡಿಯಲು ನೀರು ಕೊಟ್ಟು ಉಪಚರಿಸುತ್ತೇನೆ ಮತ್ತು ಅಭಿನಂದಿಸುತ್ತೇನೆ.[7]

ಮನೆಯಲ್ಲಿರುವ ಪಾತ್ರೆಗಳನ್ನು ಸ್ವಚ್ಛವಾಗಿಡುತ್ತೇನೆ. ರುಚಿ, ಶುಚಿಯಾಗಿರುವ ಮೃಷ್ಟಾನ್ನವನ್ನು ನನ್ನ ಪತಿಗಳಿಗೆ ಊಟ ಮಾಡಿಸುತ್ತೇನೆ. ಮನೆಯನ್ನು ಸ್ವಚ್ಛವಾಗಿಡುತ್ತೇನೆ.[8]

ತಿರಸ್ಕಾರದ ಮಾತುಗಳನ್ನು ನನ್ನ ಪತಿಯೊಡನೆ ಆಡುವದಿಲ್ಲ. ದುಷ್ಟ ಸ್ತ್ರೀಯರ ಜೊತೆಗೆ ನಾನು ಹೋಗುವದಿಲ್ಲ. ಆಲಸ್ಯರಹಿತಳಾಗಿ ಪತಿಸೇವೆ ಮಾಡುತ್ತೇನೆ. ಅವರಿಗೆ ಅನುಕೂಲಕರಳಾಗಿ ಕೆಲಸ ಮಾಡುತ್ತ ಇರುತ್ತೇನೆ.[9]

ಅಕಾಲದಲ್ಲಿ ಕಾರಣವಿಲ್ಲದೇ ನಗುವದಿಲ್ಲ. ಮನೆಯ ಬಾಗಿಲಲ್ಲಿ ಮತ್ತೆ ಮತ್ತೆ ಹೋಗಿ ನಿಲ್ಲುವದಿಲ್ಲ. ಮನೆಯ ತೋಟದಲ್ಲಿ ಹೆಚ್ಚು ಕಾಲ ಓಡಾಡುವದಿಲ್ಲ. ನನ್ನ ಪತಿ ಬೇರೆ ಊರಿಗೆ ಹೋದಾಗ ಅವರು ಮರಳಿ ಬರುವವರೆಗೆ ನಾನು ಹೂ ಮುಡಿಯುವದಿಲ್ಲ. ಗಂಧ ಪೂಸಿಕೊಳ್ಳುವದಿಲ್ಲ. ಯಾವ ವಿಧವಾದ ಅಲಂಕಾರ ಮಾಡಿಕೊಳ್ಳುವದಿಲ್ಲ. ಪತಿಯ ಸುಖಾಗಮನವನ್ನು ಬಯಸುತ್ತಾ ವ್ರತಚಾರಿಣಿಯಾಗಿರುತ್ತೇನೆ.[10]

ಯಾವ ಪಾನೀಯವನ್ನು ನನ್ನ ಪತಿ ವರ್ಜಿಸುವನೋ, ಯಾವ ಆಹಾರವನ್ನು ನನ್ನ ಪತಿ ಸೇವಿಸುವದಿಲ್ಲವೋ, ಯಾವ ವಸ್ತುವಿನ ಸುಖವನ್ನು ನನ್ನ ಪತಿ

---

6. ನಾ ಭುಕ್ತವತಿ ನಾಸ್ನಾತೇ ನಾ ಸಂವಿಷ್ಟೇ ಚ ಭರ್ತರಿ ।
ನ ಸಂವಿಶಾಮಿ ನಾಶ್ನಾಮೀ ಸದಾ ಕರ್ಮಕರೇಷ್ವಪಿ ॥ ವನಪರ್ವ
7. ಕ್ಷೇತ್ರಾತ್ ವನಾದ್ವಾ ಗ್ರಾಮಾದ್ವಾ ಭರ್ತಾರಂ ಗೃಹಮಾಗತಮ್ ।
ಅಭ್ಯುತ್ಥಾಯ ಅಭಿನಂದಾಮಿ ಆಸನೇನ ಉದಕೇನ ಚ ॥ ”
8. ಪ್ರಮೃಷ್ಟಭಾಂಡಾ ಮೃಷ್ಟಾನ್ನಾ ಕಾಲೇ ಭೋಜನದಾಯಿನೀ ॥ ”
9. ಅತಿರಸ್ಕೃತ ಸಂಭಾಷಾ ದುಃಸ್ತ್ರಿಯೋ ನಾನುಸೇವತೀ ॥
ಅನುಕೂಲವತೀ ನಿತ್ಯಂ ಭವಾಮಿ ಅನಲಸಾ ಸಹಾ ॥ ”
10. ಅನರ್ಮಚಾಪಿ ಹಸಿತಂ ದ್ವಾರಿಸ್ಥಾನಮಭೀಕ್ಷ್ಣಶಃ ॥
ಅವಸ್ಕರೇ ಚಿರಸ್ಥಾನಂ ನಿಷ್ಕುಟೇಷು ಚ ವರ್ಜಯೇ ॥
ಯದಾ ಪ್ರವಸತೇ ಭರ್ತಾ ಕುಟುಂಬಾರ್ಥೇನ ಕೇನಚಿತ್
ಸುಮನೋವರ್ಣಕಾಪೇತಾ ಭವಾಮಿ ವ್ರತಚಾರಿಣೀ ॥ ”

ವರ್ಜಿಸುವನೋ, ಆ ಎಲ್ಲವನ್ನು ನಾನು ಸಹ ವರ್ಜಿಸುತ್ತೇನೆ.[11]

ಪತಿಯ ಆಶ್ರಯದಲ್ಲಿರುವುದು, ಪತಿಶುಶ್ರೂಷಣೆ ಮಾಡುವದು ಪತ್ನಿಯ ಮುಖ್ಯ ಧರ್ಮ, ಅದೇ ಸನಾತನ ಧರ್ಮ, ಪತಿಯೇ ದೇವರು, ಅವನೇ ಗತಿ, ಅಂತಹ ಪತಿಯ ವಿಷಯದಲ್ಲಿ ಅಪ್ರಿಯವಾದ ಕಾರ್ಯ ಮಾಡಲು ಯಾವಳು ಇಚ್ಛಿಸುತ್ತಾಳೆ?[12]

ನನ್ನ ಪತಿಯ ಆಜ್ಞೆಯಂತೆ ನಾನು ಯಾವಾಗಲೂ ನಡೆದುಕೊಳ್ಳುತ್ತೇನೆ. ಪತಿಯ ಮನಸ್ಸಿಗೆ ಆಹ್ಲಾದವನ್ನುಂಟು ಮಾಡಲು ನಾನು ಅಲಂಕಾರ ಮಾಡಿಕೊಳ್ಳುತ್ತೇನೆ. ಸರ್ವದಾ ಅವರಿಗೆ ಪ್ರಿಯವಾಗುವ ಕಾರ್ಯವನ್ನೇ ಮಾಡುವುದರಲ್ಲಿ ನಿರತಳಾಗಿರುತ್ತೇನೆ.[13].

ವೀರಮಾತೆಯಾದ, ಸತ್ಯವಾದಿನಿಯಾದ ಹಿರಿಯಳಾದ, ಅತ್ತೆ ಕುಂತೀದೇವಿಯನ್ನು ಸ್ನಾನ, ಪಾನ, ಭೋಜನ ವಸ್ತ್ರಾದಿಗಳಿಂದ ದಿನವೂ ನಾನೇ ಉಪಚರಿಸುತ್ತೇನೆ.[14].

ಸಾವಧಾನದಿಂದ ವಿನೀತಳಾಗಿ ಅನುದಿನ ನಾನು ಅವರ ಸೇವೆಯನ್ನು ಮಾಡುವುದರಿಂದ, ಹಿರಿಯರ ಶುಶ್ರೂಷೆ ಮಾಡುವುದರಿಂದ ನನ್ನ ಪತಿಗಳು ನನ್ನ ವಶವರ್ತಿಗಳಾಗಿದ್ದಾರೆ.[15]

ನಾನು ಎಲ್ಲರಿಗಿಂತ ಮೊದಲು ಏಳುತ್ತೇನೆ. ಎಲ್ಲರೂ ಮಲಗಿದ ನಂತರವೇ ಮಲಗುತ್ತೇನೆ. ಈ ರೀತಿ ಹಗಲಿನಲ್ಲಿ, ರಾತ್ರಿಯಲ್ಲಿ ನನ್ನ ಸುಖ ಬದಿಗೊತ್ತಿ ಪತಿಸೇವಾನಿರತಳಾಗಿರುವುದೇ ನನ್ನ ಪತಿಗಳು ನನಗೆ ವಶವಾಗಿರಲು ಮುಖ್ಯ ಕಾರಣವಾಗಿದೆ.[16]

ದ್ರೌಪದೀದೇವಿಯರು ಇಲ್ಲಿ ತಿಳಿಸಿದಂತೆ ಪತಿ ಸೇವೆ ಮಾಡಿ ಎಲ್ಲ ಸಾಧ್ವೀಮಣಿಗಳು ತಮ್ಮ ಪತಿಗಳು ತಮ್ಮ ವಶವರ್ತಿಯಾಗುವಂತೆ ಮಾಡಿಕೊಳ್ಳಬೇಕು.

****

---

11. ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ॥ ವನಪರ್ವ
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ವರ್ಜಯಾಮ್ಯಹಮ್ ॥
12. ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ ।
ಸ ದೇವಃ ಸಾ ಗತಿರ್ನಾನ್ಯಾ ತಸ್ಯ ಕಾ ವಿಪ್ರಿಯಂ ಚರೇತ್ ॥ ”
13. ಯಥೋಪದೇಶಂ ನಿಯತಾ ವರ್ತಮಾನಾ ವರಾಂಗನೇ ।
ಸ್ವಲಂಕೃತಾ ಸುಪ್ರಯಾತಾ ಭರ್ತುಃ ಪ್ರಿಯಹಿತೇ ರತಾ ॥ ”
14. ನಿತ್ಯಮಾರ್ಯಾಂ ಅಹಂ ಕುಂತೀಂ ವೀರಸೂಂ ಸತ್ಯವಾದಿನೀಮ್ ।
ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನ ಭೋಜನೈಃ ॥ ”
15. ಅವಧಾನೇನ ಸುಭಗೇ ನಿತ್ಯೋತ್ಥಿತ ತಯೈವ ಚ ।
ಭರ್ತಾರೋ ವಶಗಾ ಮಹ್ಯಂ ಗುರುಶುಶ್ರೂಷಯೈವ ಚ ॥ ”
16. ಪ್ರಥಮಂ ಪ್ರತಿಬುಧ್ಯಾಮಿ ಚರಮಂ ಸಂವಿಶಾಮಿ ಚ ।
ನಿತ್ಯ ಕಾಲಮಹಂ ಸತ್ಯೇ ಏತತ್ ಸಂವನನಂ ಮಮ ॥ ”

# ಶ್ರೀಮನ್‌ಮಹಾಭಾರತದಲ್ಲಿ ಸ್ತ್ರೀಧರ್ಮಗಳು -II

ಪಾರ್ವತೀದೇವಿಯು ಗಂಗಾದೇವಿಯನ್ನು ಕುರಿತು ಉಪದೇಶಿಸಿದ ಸ್ತ್ರೀಧರ್ಮಗಳು ಶ್ರೀಮನ್ ಮಹಾಭಾರತದ ಅನುಶಾಸನಪರ್ವದಲ್ಲಿ ಉಕ್ತವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

ಯಾವ ಸ್ತ್ರೀಯ ಸ್ವಭಾವ ಗುಣಗಳು ಉತ್ತಮವಾಗಿರುವವೋ, ಯಾವಾಗಲೂ ಒಳ್ಳೆಯ ಮಾತುಗಳನ್ನು ಯಾವ ಸ್ತ್ರೀಯು ಆಡುವಳೋ, ಪತಿಯು ನೋಡಿದ ಕೂಡಲೇ ಅವನ ಮನಸ್ಸಿಗೆ ಸುಖ ಉಂಟಾಗುವ ರೀತಿಯಲ್ಲಿರುವಳೋ, ಪರಪುರುಷನ ಕಡೆಗೆ ಯಾವಾಗಲೂ ಮನಸ್ಸನ್ನು ಹರಿಸುವದಿಲ್ಲವೋ ಪತಿಯ ಸಮ್ಮುಖದಲ್ಲಿ ಯಾವಾಗಲೂ ನಗುಮುಖದಿಂದ ಇರುವಳೋ, ಎಲ್ಲ ಕಾಲದಲ್ಲಿ ಪತಿಯನ್ನು ದೇವತೆಯಂತೆ ಕಾಣುವಳೋ ಅಂತಹ ಸ್ತ್ರೀಯು ಪತಿವ್ರತಾಧರ್ಮ ಪರಾಯಣಳು.[1]

ಯಾವ ಸಾಧ್ವಿಯು ಪತಿಯನ್ನು ದೇವತೆಯೆಂದೇ ಭಾವಿಸಿ, ಅವನು ಹೇಳಿದಂತೆ ಕೇಳಿಕೊಂಡು ಅವನ ಸೇವೆ ಮಾಡುವಳೋ, ಪತಿಯನ್ನು ಅನನ್ಯಮನಸ್ಕಳಾಗಿ ಸೇವಿಸುವಳೋ, ಒಳ್ಳೆಯ ನಿಯಮಗಳನ್ನು ಪಾಲಿಸುವಳೋ, ಒಳ್ಳೆಯ ಸುಖದರ್ಶನಳೋ, ಮಗನ ಮುಖವನ್ನು ಬಾರಿಬಾರಿಗೂ ನೋಡುವಂತೆ ಪತಿಯ ಮುಖವನ್ನು ನೋಡುವಳೋ, ನಿಯತ ಆಹಾರವನ್ನು ಸ್ವೀಕರಿಸುವಳೋ ಅವಳೇ ಸ್ತ್ರೀಧರ್ಮಚಾರಿಣಿಯು.[2]

ಯಾವ ಸ್ತ್ರೀಯು ಪರಿಶುದ್ಧವಾದ ಅಂತಃಕರಣವುಳ್ಳವಳಾಗಿರುವಳೋ, ಪತಿಶುಶ್ರೂಷೆಯಲ್ಲಿ ಕುಶಲಳೋ, ಪುತ್ರವತಿಯೋ, ಪತಿಗೆ ಪ್ರಿಯಳಾಗಿರುವಳೋ, ಪತಿಯನ್ನು ತನ್ನ ಪ್ರಾಣಗಳಿಗೆ ಸಮಾನವನ್ನಾಗಿ ಭಾವಿಸಿರುವಳೋ ಅವಳು ಧರ್ಮಚಾರಿಣಿಯು. ಯಾವ

---

1. ಸುಸ್ವಭಾವಾ ಸುವಚನಾ ಸುವೃತ್ತಾ ಸುಖದರ್ಶನಾ।
ಅನನ್ಯ ಚಿತ್ತಾ ಸುಮುಖೀ ಭರ್ತುಃ ಸಾ ಧರ್ಮಚಾರಿಣೀ॥
ಸಾ ಭವೇದ್ಧರ್ಮಪರಮಾ ಸಾ ಭವೇದ್ಧರ್ಮಭಾಗಿನೀ।
ದೇವವತ್ಸತತಂ ಸಾಧ್ವೀ ಯಾ ಭರ್ತಾರಂ ಪ್ರಪಶ್ಯತಿ॥ ಅನುಶಾಸನ ಪರ್ವ.146 ಅಧ್ಯಾಯ

2. ಶುಶ್ರೂಷಾ ಪರಿಚಾರಂ ಚ ದೇವವದ್ಯಾ ಕರೋತಿ ಚ।
ನಾನ್ಯಭಾವಾ ಹ್ಯವಿಮನಾಃ ಸುವ್ರತಾ ಸುಖದರ್ಶನಾ॥
ಪುತ್ರವಕ್ತ್ರಮಿವಾಭೀಕ್ಷ್ಣಂ ಭರ್ತುರ್ವದನ ಮೀಕ್ಷತೇ।
ಯಾ ಸಾಧ್ವೀ ನಿಯತಾಹಾರಾ ಸಾ ಭವೇದ್ಧರ್ಮಚಾರಿಣೀ॥ "

ಸ್ತ್ರೀಯು ಪ್ರಸನ್ನವಾದ ಮನಸ್ಸಿನಿಂದ ಪತಿಯ ಸೇವೆಯಲ್ಲಿ, ಶುಶ್ರೂಷೆಯಲ್ಲಿ ಯಾವಾಗಲೂ ನಿರತಳೋ, ಪತಿಯ ವಿಷಯದಲ್ಲಿ ಅಚಲವಾದ ವಿಶ್ವಾಸವನ್ನಿಟ್ಟಿರುವಳೋ, ವಿನಯಶೀಲಳೋ ಅವಳು ಧರ್ಮಚಾರಿಣಿಯು.[3]

ಅಲ್ಪಶಕ್ತಿಯವಳು ಮಾಡಲಾಗದ ಅತ್ಯಂತ ಕಠಿಣವಾದ ಪತಿಸೇವೆಯನ್ನು ಯಾವಳು ನಿತ್ಯವೂ ಮಾಡುವಳೋ, ಪತಿಯಲ್ಲಿಯೇ ನೆಟ್ಟ ಮನಸ್ಸುಳ್ಳವಳಾಗಿರುವಳೋ, ಪತಿಯ ಹಿತದಲ್ಲಿ ಯಾವಾಗಲೂ ಆಸಕ್ತಳಾಗಿರುವಳೋ ಅವಳು ಪತಿವ್ರತಾಧರ್ಮದ ಫಲಕ್ಕೆ ಭಾಗಿನಿಯಾಗುತ್ತಾಳೆ.[4]

ಸ್ತ್ರೀಗೆ ಪತಿಯೇದೈವವು, ಪತಿಯೇ ಬಂಧುವು ಪತಿಯೇ ಪರಮಾಶ್ರಯನು. ಪತಿಗೆ ಸಮಾನವಾದ ಆಶ್ರಯವು ಸ್ತ್ರೀಗೆ ಬೇರೆಯಾವುದೂ ಇಲ್ಲ.[5]

ಪತಿಯು ದರಿದ್ರನಾಗಿರಲಿ, ರೋಗಪೀಡಿತನಾಗಿರಲಿ, ಆಪತ್ತಿನಲ್ಲಿರಲಿ, ಶತ್ರುಮಧ್ಯದಲ್ಲಿರಲಿ,ಶಾಪಪೀಡಿತನಾಗಿರಲಿ, ಸತಿಯು ಪತಿಹೇಳಿದಂತೆ ನಡೆಯಬೇಕು. ಆ ಕಾಲದಲ್ಲಿ ಅವನು ಹೇಳುವುದು ಆಕಾರ್ಯವಾಗಿದ್ದರೂ ಅದನ್ನು ಆಪದ್ಧರ್ಮವೆಂದು ಭಾವಿಸಿ ಆ ಕಾರ್ಯಮಾಡಿಬಿಡಬೇಕು.[6]

****

---

3. ಯಾ ನಾರೀ ಪ್ರಯತಾ ದಕ್ಷಾ ಯಾ ನಾರೀ ಪುತ್ರಿಣೀ ಭವೇತ್ ।
ಪತಿಪ್ರಿಯಾ ಪತಿಪ್ರಾಣಾ ಸಾ ನಾರೀ ಧರ್ಮಭಾಗಿನೀ ॥
ಶುಶ್ರೂಷಾಂ ಪರಿಚರ್ಯಾಂ ಚ ಕರೋತ್ಯವಿಮನಾಃ ಸದಾ ।
ಸುಪ್ರತೀತಾ ವಿನೀತಾ ಚ ಸಾ ನಾರೀ ಧರ್ಮಭಾಗಿನೀ ॥ ಅನುಶಾಸನ ಪರ್ವ.146 ಅಧ್ಯಾಯ

4. ವ್ರತಂ ಚರತಿ ಯಾ ನಿತ್ಯಂ ದುಶ್ಚರಂ ಲಘು ಸತ್ತ್ವಯಾ ।
ಪತಿಚಿತ್ತಾ ಪತಿಹಿತಾ ಸಾ ಪತಿವ್ರತ ಭಾಗಿನೀ ॥ ,,

5. ಪತಿರ್ಹಿ ದೇವೋ ನಾರೀಣಾಂ ಪತಿರ್ಬಂಧುಃ ಪತಿರ್ಗತಿಃ ।
ಪತ್ಯಾಸಮಾ ಗತಿರ್ನಾಸ್ತಿ ದೈವತಂ ವಾ ಯಥಾ ಪತಿಃ ॥ ,,

6. ಯದ್ಯಕಾರ್ಯಮಧರ್ಮಂ ವಾ ಯದಿ ವಾ ಪ್ರಾಣನಾಶಮ್ ।
ಪತಿರ್ಬ್ರೂಯಾದ್ದರಿದ್ರೋ ವಾ ವ್ಯಾಧಿತೋ ವಾ ಕಥಂಚನ ॥ ,,
ಆಪನ್ನೋ ರಿಪುಸಂಸ್ಥೋ ವಾ ಬ್ರಹ್ಮಶಾಪಾರ್ದಿತೋಽಪಿ ವಾ ।
ಆಪದ್ಧರ್ಮಾನನು ಪ್ರೇಕ್ಷ್ಯ ತತ್ಕಾರ್ಯಮವಿಶಂಕಯಾ ॥ ,,

# ॥ ಶ್ರೀಮದ್ಭಾಗವತಪುರಾಣದಲ್ಲಿ ಸ್ತ್ರೀಧರ್ಮಗಳು

ಗೃಹಿಣಿಯಾದವಳು ಯಾವಾಗಲೂ ಪತಿಪರಾಯಣೆಯಾಗಿರಬೇಕು. ಪತಿಯನ್ನು ದೇವರಂತೆ ಗೌರವಿಸಬೇಕು. ಅವನ ಮಾತಿನಂತೆ ನಡೆಯಬೇಕು. ಪತಿಯ ಬಂಧುಗಳನ್ನು ಗೌರವಿಸಬೇಕು.

ಪತಿಯು ಪ್ರಸನ್ನನಾದ ಪಕ್ಷದಲ್ಲಿ ಪತ್ನಿಗೆ ಇಹಲೋಕದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ಯಾವುದೇ ಕೋರಿಕೆಯ ವಸ್ತು ದುರ್ಲಭವಾಗುವದಿಲ್ಲ. ಅಂದರೆ ಅವಳು ಸುಲಭವಾಗಿ ಎಲ್ಲವನ್ನೂ ಹೊಂದುತ್ತಾಳೆ.[1]

ಪತಿಯೇ ಸ್ತ್ರೀಯರಿಗೆ ಪರಮಾರಾಧ್ಯವಾದ ಇಷ್ಟದೇವರು ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.[2]

ತಮ್ಮ ಕಲ್ಯಾಣವನ್ನು ಬಯಸುವ ಪತಿವ್ರತಾ ಸ್ತ್ರೀಯರು ಅನನ್ಯಪ್ರೇಮದಿಂದ ತಮ್ಮ ಪತಿದೇವರನ್ನೇ ಪೂಜೆ ಮಾಡಬೇಕು. ಪತಿಯೇ ಅವರ ಪರಮಪ್ರಿಯತಮನಾದ ಆತ್ಮನೂ, ಈಶ್ವರನೂ, ಆಗಿದ್ದಾನೆ.[3]

ಗೃಹಿಣಿಯಾದವಳು ನಿತ್ಯವೂ ಮನೆಯಲ್ಲಿ ಕಸತೆಗೆದು ಸಾರಿಸಿ ರಂಗವಲ್ಲಿ ಹಾಕಿ ಮನೆಯನ್ನು ಅಲಂಕಾರಪೂರ್ಣವಾಗಿಡಬೇಕು. ತಾನು ಅಲಂಕೃತಳಾಗಿ, ಶುದ್ಧವಾದ ಬಟ್ಟೆಗಳನ್ನು ಧರಿಸಿ ವಿನಯಪೂರ್ಣಳಾಗಿ ಸತ್ಯವೂ, ಪ್ರಿಯವೂ ಆದ ಮಾತುಗಳಿಂದ ಪತಿಯನ್ನು ಸಂತೋಷಗೊಳಿಸಬೇಕು.[4]

ಯಾವ ಸ್ತ್ರೀಯು ಲಕ್ಷ್ಮೀದೇವಿಯಂತೆ ಪತಿಯಲ್ಲಿ ಆಸಕ್ತಳಾಗಿ ತನ್ನ ಪತಿಯಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನೆಂದು ತಿಳಿದು ಪತಿಯನ್ನು ಸೇವಿಸುವಳೋ, ಅವಳು ಲಕ್ಷ್ಮೀದೇವಿಯಂತೆ, ವೈಕುಂಠದಲ್ಲಿ ಶ್ರೀಹರಿಯ ವಿಶೇಷ ಸನ್ನಿಧಾನಯುಕ್ತ ಪತಿಯೊಂದಿಗೆ ಆನಂದಪಡುತ್ತಾಳೆ.[5]

---

1. ಸ್ತ್ರಿಯಾ ಭರ್ತರಿ ಸುಪ್ರೀತೇ ಕಃ ಕಾಮ ಇಹಚಾಗಮಃ ॥ 6–18–32
2. ಪತಿರೇವ ಹಿ ನಾರೀಣಾಂ ದೈವತಂ ಪರಮಂ ಸ್ಮೃತಮ್ ॥ 6–18–33
3. ತಸ್ಮಾತ್ ಪತಿವ್ರತಾನಾರ್ಯಃ ಶ್ರೇಯಸ್ಕಾಮಾ ಸುಮಧ್ಯಮೇ ।
   ಯಜಂತೇSನನ್ಯ ಭಾವೇನ ಪತಿಮಾತ್ಮಾನಮೀಶ್ವರಮ್ ॥ 6–18–35
4. ಸಂಮಾರ್ಜನೋಪಲೇಪಾಭ್ಯಾಂ ಗೃಹಮಂಡಲವರ್ತನೈಃ ।
   ಸ್ವಯಂ ಚ ಮಂಡಿತಾ ನಿತ್ಯಂ ಪರಿಮೃಷ್ಟ ಪರಿಚ್ಛದಾ ॥ 7–11–26
5. ಯಾ ಪತಿಂ ಹರಿಭಾವೇನ ಭಜೇತ್ ಶ್ರೀರಿವ ತತ್ಪರಾ ।
   ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥ 7–11–29

ಪತಿಯ ಸೇವೆ ಮಾಡುವುದು, ಅವನಿಗೆ ಅನುಕೂಲಳಾಗಿರುವುದು, ಪತಿಯ ಸಹೋದರರನ್ನು, ಬಂಧುಗಳನ್ನು ಪ್ರಸನ್ನಗೊಳಿಸುವುದು ಮತ್ತು ಯಾವಾಗಲೂ ಪತಿಯ ನಿಯಮಗಳನ್ನು ರಕ್ಷಿಸುವುದು, ಇವೆಲ್ಲವೂ ಪತಿಯೇ ಪರಮದೈವವೆಂದು ತಿಳಿಯುವ ಪತಿವ್ರತಾ ಸ್ತ್ರೀಯರ ಧರ್ಮಗಳಾಗಿವೆ.[6]

ಸ್ತ್ರೀಯು ತನ್ನ ಪತಿಯ ಸಣ್ಣ ಪುಟ್ಟ ಇಚ್ಛೆಗಳನ್ನು ಸಮಯಕ್ಕೆ ತಕ್ಕಂತೆ ಪೂರ್ಣಗೊಳಿಸಬೇಕು. ವಿನಯ, ಇಂದ್ರಿಯಸಂಯಮ, ಸತ್ಯಹಾಗೂಪ್ರಿಯವಾದ ವಚನಗಳಿಂದ ಪ್ರೇಮಪೂರ್ವಕವಾಗಿ ಪತಿಸೇವೆಯನ್ನು ಮಾಡಬೇಕು.[7]

---

6. ಸ್ತ್ರೀಣಾಂ ಚ ಪತಿದೇವಾನಾಂ ತಚ್ಛುಶ್ರೂಷಾನುಕೂಲತಾ ।
ತದ್ಬಂಧುಷ್ವನುವೃತ್ತಿಶ್ಚ ನಿತ್ಯಂ ತದ್ ವ್ರತಧಾರಣಮ್ ॥ 7–11–25

7. ಕಾಮೈರುಚ್ಚಾವಚೈಃ ಸಾಧ್ವೀ ಪ್ರಶ್ರಯೇಣ ದಮೇನ ಚ ।
ವಾಕ್ಯೈಃ ಸತ್ಯೈಃ ಪ್ರಿಯೈಃ ಪ್ರೇಮ್ಣಾ ಕಾಲೇ ಕಾಲೇ ಭಜೇತ ಪತಿಮ್॥ 7–11–27

****

# ಶ್ರೀವಿಷ್ಣುಧರ್ಮೋತ್ತರಪುರಾಣದಲ್ಲಿ ಸ್ತ್ರೀಧರ್ಮಗಳು

ಅಗ್ನಿಸಾಕ್ಷಿಕವಾಗಿ ಸಧರ್ಮಚಾರಿಣಿಯಾದವಳು ಒಳ್ಳೆಯ ಸ್ವಭಾವದವಳೂ, ಒಳ್ಳೆಯ ಮನಸ್ಸುಳ್ಳವಳೂ, ಸುವ್ಯವಸ್ಥಿತಳೂ, ಒಳ್ಳೆಯ ವಿಚಾರವಂತಳೂ, ಪತಿಯ ಹೊರತು ಯಾರನ್ನೂ ಮನಸ್ಸಿನಲ್ಲಿ ಭಾವಿಸದಿರುವವಳೂ, ಹಸನ್ಮುಖಿಯೂ ಆಗಿರಬೇಕು.[1]

ಮಗನ ಮುಖವನ್ನು ನೋಡುವಂತೆ ಪ್ರೀತಿಯಿಂದ ಪತಿಯ ಮುಖವನ್ನು ನೋಡತಕ್ಕವಳೂ, ಪತಿವ್ರತೆಯೂ, ಯೋಗ್ಯವಾದ ಆಚಾರವುಳ್ಳವಳೂ ಧರ್ಮಚಾರಿಣಿ ಎನಿಸುತ್ತಾಳೆ.[2]

ಪತಿಯೊಡನೆ ಮಾಡಬಹುದಾದ ಈ ಧರ್ಮಗಳನ್ನು ತಿಳಿದು ಇವು ಮಂಗಳಕರವಾದ ಮಹಾಶ್ರಮಧರ್ಮಗಳೆಂದು ಭಾವಿಸಿ ಧರ್ಮಪರಳಾಗಿ ಯಾವಳು ಇರುವಳೋ, ಅವಳೇ ಪತಿಯೊಡನೆ ಸಮಾನವ್ರತವುಳ್ಳವಳಾಗಿರುತ್ತಾಳೆ .[3]

---

1. ಸುಸ್ವಭಾವಾ ಸುವಿಮನಾ ಸುವಿಭಕ್ತಾ ಸುದರ್ಶನಾ ।
ಅನನ್ಯಚಿತ್ತಾ ಸುಮುಖೀ ಭರ್ತುಸ್ಸಾ ಧರ್ಮಚಾರಿಣೀ ॥ 322 ಅ

2. ಪುತ್ರವಕ್ತ್ರಮಿವಾಭೀಕ್ಷ್ಣಂ ಭರ್ತುರ್ವದನಮೀಕ್ಷತೀ ।
ಯಾ ಸಾಧ್ವೀ ನಿಯತಾಚಾರಾ ಸಾ ಭವೇದ್ಧರ್ಮಚಾರಿಣೀ ॥ 322 ಅ

3. ಶ್ರುತ್ವೇದಂ ಪತಿಧರ್ಮಂ ವೈ ಮಹಾಶ್ರಮಕೃತಂ ಶಿವಂ ।
ಯಾ ಭವೇದ್ಧರ್ಮಪರಮಾ ನಾರೀ ಭರ್ತೃಸಮವ್ರತಾ ॥ 322 ಅ

ಪತಿವ್ರತೆಯಾದ ಯಾವ ಭಾರ್ಯೆಯು ಪತಿಯನ್ನು ದೇವತೆಯಂತೆ ನೋಡುತ್ತಾ ಅವನ ಶುಶ್ರೂಷೆ, ಪರಿಚಾರ್ಯದಿಗಳನ್ನು ದೇವರಲ್ಲಿ ನಡೆಸುವಂತೆ ನಡೆಸುತ್ತಾ, ಮನಸ್ಸಿನಿಂದಲೇ ಪತಿಗೆ ವಶ್ಯಳಾಗಿ, ಒಳ್ಳೆಯ ಮನಸ್ಸಿನಿಂದಲೂ, ವ್ರತದಿಂದಲೂ ಸಮಾಧಾನಹೊಂದಿ, ಪತಿಯ ಸ್ಮರಣೆಯಲ್ಲಿ ನಿರತಳಾಗಿರುವಳೋ ಅವಳೇ ಧರ್ಮಚಾರಿಣಿ ಎನಿಸುತ್ತಾಳೆ.[4]

ಯಾವ ಸ್ತ್ರೀಯು ಕಠಿಣೋಕ್ತಿಗಳಿಂದ ಧಿಕ್ಕರಿಸಲ್ಪಟ್ಟರೂ, ಕ್ರೂರದೃಷ್ಟಿಯಿಂದ ನೋಡಲ್ಪಟ್ಟರೂ ಪತಿಯ ವಿಷಯದಲ್ಲಿ ಪ್ರಸನ್ನ ಮುಖಿಯಾಗಿಯೇ ಇರುತ್ತಾಳೆಯೋ, ಅವಳೇ ಪತಿವ್ರತೆ ಎನಿಸುತ್ತಾಳೆ.[5]

ಚಂದ್ರಸೂರ್ಯರೂ ಸಹ ಯಾವಳ ರೂಪವನ್ನು ನೋಡಲಾರರೋ, ಪತಿಯನ್ನು ಹೊರತು ಯಾವಳು ಚಂದ್ರಸೂರ್ಯರನ್ನೂ ಸಹ ನೋಡುವದಿಲ್ಲವೋ ಅಂತಹ ಸ್ತ್ರೀಯು ಧರ್ಮಚಾರಿಣಿ ಎನಿಸುತ್ತಾಳೆ.[6]

ಯಾವ ಸತಿಯು ದರಿದ್ರನೂ, ವ್ಯಾಧಿಪೀಡಿತನೂ, ದುಃಖಿತನೂ, ಮನೋವ್ಯಥೆಯಿಂದ ಕೂಡಿದವನೂ ಆದ ಪತಿಯನ್ನು ಪ್ರೀತಿಯಿಂದ ಪುತ್ರನಂತೆ ರಕ್ಷಿಸುವಳೋ, ಅವಳೇ ಧರ್ಮಚಾರಿಣಿ ಎನಿಸುತ್ತಾಳೆ .[7]

ಯಾವ ಸ್ತ್ರೀಯು ಪರಿಶುದ್ಧಳಾಗಿಯೂ, ಪತಿಯ ಕಾರ್ಯದಲ್ಲಿ ದಕ್ಷಳಾಗಿಯೂ ಯಾವಳು ಪುತ್ರವತಿಯಾಗಿ, ಪತಿವ್ರತೆಯಾಗಿ, ಪತಿಪ್ರಾಣಳೇ ಆಗಿರುವಳೋ ಆ ನಾರಿಯೇ ಧರ್ಮಚಾರಿಣಿ ಎನಿಸುತ್ತಾಳೆ.[8]

---

4. ದೇವವತ್ಸತತಂ ಸಾಧ್ವೀ ಭರ್ತಾರಮನುಪಶ್ಯತಿ ।
ಶುಶ್ರೂಷಾಂ ಪರಿಚಾರ್ಯಾಂ ಚ ದೇವತುಲ್ಯಂ ಪ್ರಕುರ್ವತೀ ॥
ವಶ್ಯಾಭಾವೇನ ಸುಮನಾಃ ಸುವ್ರತಾ ಸುಸಮಾಹಿತಾ ॥
ಅನನ್ಯಚಿತ್ತಾ ಸುಮನಾ ಭರ್ತುಃ ಸಾ ಧರ್ಮಭಾಗಿನೀ ॥ 322 ಅ

5. ಪಾರುಷ್ಯಮಪಿ ವ್ರೋಕ್ತಾ ಯಾ ದೃಷ್ಟಾ ವಾ ಕ್ರೂರಚಕ್ಷುಷಾ ।
ಸುಪ್ರಸನ್ನಮುಖೀ ಭರ್ತುರ್ಯಾನಾರೀ ಸಾ ಪತಿವ್ರತಾ ॥ 322 ಅ

6. ನ ಚಂದ್ರಸೂರ್ಯೌ ತದ್ರೂಪಂ ನೇನೌ ಯಾಚ ನಿರೀಕ್ಷತೇ ।
ಭರ್ತೃವರ್ಜಂ ವರಾರೋಹಾ ಸಾ ಭವೇದ್ಧರ್ಮಭಾಗಿನೀ ॥ 322 ಅ

7. ದರಿದ್ರಂ ವ್ಯಾಧಿನಂ ದೀನಂ ಚಾಧಿನಾ ಪರಿಕೀರ್ತಿತಂ ।
ಪತಿಂ ಪುತ್ರಮಿವಾರಕ್ಷೇತ್ಸಾ ನಾರೀ ಧರ್ಮಭಾಗಿನೀ ॥ 322 ಅ

8. ಯಾ ನಾರೀ ಪ್ರಯತಾ ದಕ್ಷಾ ಯಾ ನಾರೀ ಪುತ್ರಿಣೀ ಭವೇತ್ ।
ಪತಿವ್ರತಾ ಪತಿಪ್ರಾಣಾ ಸಾ ನಾರೀ ಧರ್ಮಭಾಗಿನೀ ॥ 322 ಅ

ಯಾವ ನಾರಿಯು ಪತಿಯ ಶುಶ್ರೂಷಾದಿಗಳನ್ನು ಯಾವ ವಿಧವಾದ ವೈಮನಸ್ಯವಿಲ್ಲದೇ, ಸಂತುಷ್ಟಳಾಗಿ ಮಾಡುವಳೋ, ಅವಳೇ ಧರ್ಮಚಾರಿಣಿ ಎನಿಸುತ್ತಾಳೆ.[9]

ಪತಿಯ ಪ್ರೀತಿಗೆ ಪಾತ್ರಳಾದ ಯಾವ ಭಾರ್ಯೆಗೆ, ಪತಿಗೆ ಇಷ್ಟವಾಗದ ಪದಾರ್ಥಗಳಲ್ಲಿ ಭೋಗಗಳಲ್ಲಿ, ಐಶ್ವರ್ಯದಲ್ಲಿ, ಸುಖದಲ್ಲಿ ಆಶೆಯು ಇರುವುದಿಲ್ಲವೋ ಅಂತಹ ಭಾರ್ಯೆಯು ಧರ್ಮಚಾರಿಣಿ ಎನಿಸುತ್ತಾಳೆ.[10]

ಯಾವ ಸ್ತ್ರೀಯು ಕೇವಲ ಕಾಮಾರ್ಥವನ್ನೇ ಇಚ್ಛಿಸದೇ, ನಿತ್ಯವೂ ಮನೆ ಕೆಲಸಗಳಲ್ಲಿಯೇ ಆಸಕ್ತಳಾಗಿ, ಮನೆಯನ್ನು ಗುಡಿಸುವದು, ಗೋಮಯದಿಂದ ಸಾರಿಸಿ ಶುದ್ಧಗೊಳಿಸುವದು, ಅಗ್ನಿಕಾರ್ಯಗಳಾದ ವೈಶ್ವದೇವ ಮೊದಲಾದವುಗಳಲ್ಲಿ ಸಹಕರಿಸುವುದು, ನಿತ್ಯವೂ ಹೂಗಳಿಂದ ಪೂಜೆಗೆ ಮಾಲೆ ಮಾಡಿಕೊಡುವದು, ದೇವ, ಅತಿಥಿ, ಭೃತ್ಯಾದಿ ಸೇವೆಯಲ್ಲಿ ಪತಿಯೊಡನೆ ಸಹಕರಿಸುವದು, ಯಥಾವಿಧಿಯಾಗಿ ಪತಿಯ ಶೇಷಾನ್ನವನ್ನು ಭುಂಜಿಸುವದು, ಭೃತ್ಯಜನರನ್ನು ಸಂತೋಷಪಡಿಸುವದು ಇವೇ ಮೊದಲಾದ ಕಾರ್ಯಗಳಲ್ಲಿ ನಿರತಳಾಗಿರುವಳೋ, ಅವಳೇ ಧರ್ಮಚಾರಿಣಿ ಎನಿಸುತ್ತಾಳೆ.[11]

ಯಾವ ನಾರಿಯು ಅತ್ತೆಮಾವಂದಿರನ್ನು ಪಾದಸೇವೆ, ಶುಶ್ರೂಷೆಯಿಂದ ಸಂತೋಷಪಡಿಸುತ್ತ ಮಾತಾ ಪಿತೃಗಳ ವಿಷಯದಲ್ಲಿಯೂ ನಿತ್ಯವೂ ಪ್ರೀತಿಯಿಂದ ಇರುವಳೋ ಅವಳೇ ತಪೋಧನಳಾಗುತ್ತಾಳೆ. ಹಾಗೂ ಬ್ರಾಹ್ಮಣರು, ದುರ್ಬಲರು,

---

9. ಶುಶ್ರೂಷಾಂ ಪರಿಚರ್ಯಾಂ ಚ ಕರೋತ್ಯವಿಮನಾಃ ಸದಾ ।
ಸುಪ್ರತೀತಾ ಚ ಸುಮನಾಃ ಸಾ ನಾರೀ ಧರ್ಮಭಾಗಿನೀ ॥ 322 ಅ

10. ನ ಕಾಮೇಷು ನ ಭೋಗೇಷು ನೈಶ್ವರ್ಯೇ ನ ಸುಖೇ ತಥಾ ।
ಸ್ಪೃಹಾ ಯಸ್ಯಾ ಯಥಾ ಭರ್ತುಃ ಸಾ ನಾರೀ ಧರ್ಮಭಾಗಿನೀ ॥

11. ಕಾಮಾರ್ಥಾ ನ ವ್ರತಾ ನಿತ್ಯಂ ಗೃಹಶುಶ್ರೂಷಣೇ ರತಾ ।
ಸುಸಂಮೃಷ್ಟ ಕ್ಷಯಾ ಚೈವ ಗೋಶಕೃತ್ ಕೃತಲೇಪನಾ ॥ 322 ಅ
ಅಗ್ನಿಕಾರ್ಯಪರಾನಿತ್ಯಂ ಸದಾ ಪುಷ್ಪಬಲಿಪ್ರದಾ ।
ದೇವತಾತಿಥಿಭೃತ್ಯಾನಾಂ ನಿರೂಪ್ಯ ಪತಿನಾ ಸಹ ॥
ಶೇಷಾನ್ನಮುಪಭುಂಜಾನಾ ಯಥಾನ್ಯಾಯಂ ಯಥಾವಿಧಿ ।
ತುಷ್ಟಭೃತ್ಯಜನಾ ನಿತ್ಯಂ ನಾರೀ ಧರ್ಮೇಣ ಯುಜ್ಯತೇ ॥ 322 ಅ

ಅನಾಥರು, ದರಿದ್ರರು, ಕುರುಡರು, ದೀನರು ಇವರನ್ನೂ ಸಹ ಸಂತೋಷದಿಂದ ರಕ್ಷಿಸುವಳೋ ಅವಳೇ ಧರ್ಮಚಾರಿಣಿ ಎನಿಸುತ್ತಾಳೆ.[12]

ಯಾವ ನಾರಿಯು ಪತಿಯಲ್ಲಿ ಮನಸ್ಸಿಟ್ಟು, ಪತಿಯ ಪ್ರೀತಿಗೆ ಪಾತ್ರಳಾಗಿದ್ದು ಕೊಂಡು ಅವನ ಅನುಮತಿಯಿಂದ ಕ್ಲೇಶಕರಗಳಾದ ವ್ರತಗಳನ್ನು ಸಂತೋಷದಿಂದ ಆಚರಿಸುವಳೋ ಅವಳೇ ಪತಿವ್ರತೆಯೆನಿಸುತ್ತಾಳೆ ಹಾಗೂ ಯಾವಳು ಪತಿಪರಾಯಣೆಯಾಗಿ ಅವನ ವ್ರತಗಳಲ್ಲಿ ಸಹಕರಿಸುವಳೋ, ಅವಳಿಗೆ ಅದೇ ಪುಣ್ಯ ಅದೇ ತಪಸ್ಸು, ಅದೇ ಶಾಶ್ವತವಾದ ಸ್ವರ್ಗವು .[13]

ಪತಿವ್ರತಾ ಸ್ತ್ರೀಯರಿಗೆ ಪತಿಯೇ ದೈವ (ದೇವರು) ಅವನೇ ಬಂಧುವು ಅವನೇ ಉತ್ತಮಗತಿಗೂ ಸಾಧಕನು. ಪತಿಗೆ ಸಮನಾದ ದೇವತೆಯಾಗಲಿ, ಅವನೊಡನೆ ಹೊಂದಬಹುದಾದ ಗತಿಗಿಂತ ಬೇರೆ ಯಾವುದೂ ಅವಳಿಗೆ ಇಲ್ಲವೇ ಇಲ್ಲ.[14]

ಶಯನವನ್ನು ಅಪೇಕ್ಷಿಸುವ ಪತಿಯು ಪತ್ನಿಗೆ ಸ್ವರ್ಗಪ್ರದನೇ ಆಗುತ್ತಾನೆ. ಕಾರ್ಯವೇ ಆಗಲಿ, ಅಕಾರ್ಯವೇ ಆಗಲಿ, ಪ್ರಾಣನಾಶಕವೇ ಆಗಲಿ, ಅಂತಹ ಕಾರ್ಯಗಳನ್ನು ಅವನ ಪ್ರೀತಿಗಾಗಿ ಪತ್ನಿಯಾದವಳು ಮಾಡಲೇಬೇಕು.[15]

---

12. ಶ್ವಶ್ರೂ ಶ್ವಶುರಯೋಃ ಪಾದಾಂಸ್ತೋಷಯಂತೀ ಗುಣಾನ್ವಿತಾ ।
ಮಾತಾಪಿತೃರತಾ ನಿತ್ಯಂ ಯಾ ನಾರೀ ಸಾ ತಪೋಧನಾ ॥
ಬ್ರಾಹ್ಮಣಾನ್ ದುರ್ಬಲಾನಾಥ ದೀನಾಂಧ ಕೃಪಣಾಂಸ್ತಥಾ ।
ಬಿಭರ್ತ್ಯನ್ನೇನ ಯಾ ನಾರೀ ಸಾ ಪತಿವ್ರತಭಾಗಿನೀ ॥ 322 ಅ

13. ವ್ರತಂ ಚರತಿ ಯಾ ನಿತ್ಯಂ ದುಶ್ಚರಂ ಹೃಷ್ಟಮಾನಸಾ ।
ಪತಿಚಿತ್ತಾ ಪತಿರತಾ ಸಾ ಪತಿವ್ರತಭಾಗಿನೀ ॥
ಪುಣ್ಯಮೇತತ್ತಪಶ್ಚೈವ ಸ್ವರ್ಗಶ್ಚೈವ ಸನಾತನಃ ॥ 322 ಅ

14. ಪತಿರ್ಹಿದೇವೋ ನಾರೀಣಾಂ ಪತಿರ್ಬಂಧುಃ ಪತಿರ್ಗತಿಃ।
ಪತ್ಯಾಗತಿಃ ಸಮಾ ನಾಸ್ತಿ ದೈವತಂ ವಾ ಯಥಾಪತಿಃ ॥ 322 ಅ

15. ಪತಿಃ ಸ್ವರ್ಗಪ್ರದೋ ನಾರ್ಯಾ ಯದಾ ತಲ್ಪಮನಾಭವೇತ್ ।
ಯದ್ಯತ್ ಕಾರ್ಯಮಕಾರ್ಯಂ ವಾ ಯದಿ ವಾ ಪ್ರಾಣನಾಶನಂ ॥ 322 ಅ

ಪತಿಯಾದವನು ಪಾತಕಿಯಾಗಿದ್ದರೂ, ವ್ಯಾಧಿಗ್ರಸ್ತನಾಗಿದ್ದರೂ, ವಿಪತ್ತಿನಲ್ಲಿ ಸಿಲುಕಿದ್ದರೂ, ಶತ್ರುವಶನಾಗಿದ್ದರೂ, ಬ್ರಾಹ್ಮಣಶಾಪಕ್ಕೆ ಗುರಿಯಾಗಿದ್ದರೂ ಸಹ ಆಪತ್ಕಾಲದ ಧರ್ಮವನ್ನು ತಿಳಿದು ಅವನಿಗೆ ಇಷ್ಟವಾದ ಕಾರ್ಯವನ್ನು ನಿಸ್ಸಂಶಯವಾಗಿ ಪತ್ನಿಯಾದವಳು ಮಾಡಿಯೇ ಮಾಡಬೇಕು.[16]

ಪತಿಪರಾಯಣೆಯಾದ ಸ್ತ್ರೀಗೆ ಪರತಂತ್ರತೆಯೇ ಸ್ವಭಾವ. ಸ್ವಾತಂತ್ರ್ಯವೇ ಅವಳಿಗೆ ದೊಡ್ಡ ಪಾಪ, ಆದುದರಿಂದ ಶಾಶ್ವತವಾದ ಸ್ವರ್ಗಸುಖವನ್ನು ಬಯಸುವ ಸ್ತ್ರೀಯು ಪತಿಯವಶಳಾಗಿಯೇ ಯಾವಾಗಲೂ ಇರಬೇಕು.[17]

---

16. ಪತಿಃ ಪಾತಕಯುಕ್ತೋ ವಾ ವ್ಯಾಧಿತೋ ವಾ ಕಥಂಚನ ।
ಆಪನ್ನೋ ರಿಪುಸಂಸ್ಥೋ ವಾ ಬ್ರಹ್ಮಶಾಪಾರ್ದಿತೋಽಪಿ ವಾ ।
ಆಪದ್ಧರ್ಮಾನನುಪ್ರೇಕ್ಷ್ಯ ತತ್ಕಾರ್ಯಮವಿಶಂಕಯಾ ॥ 322 ಅ

17. ಸ್ವಾತಂತ್ರ್ಯಮುಕ್ತಂ ಪರಮಂ ಹಿ ಪಾಪಂ
ಸ್ತ್ರೀಣಾಂ ಸದಾ ತೇನ ಸದೈವ ನಾರೀ ।
ಸ್ವಾತಂತ್ರ್ಯಹೀನಾ ಸತತಂ ಭವೇದ್ಧಿ
ಯಾ ಕಾಮಯೇನ್ನಾಕಮಿತಶ್ಚಿರಾಯ ॥ 322 ಅ

****

# ಶ್ರೀಬ್ರಹ್ಮವೈವರ್ತಪುರಾಣದಲ್ಲಿ ಸ್ತ್ರೀಧರ್ಮಗಳು

ಸ್ತ್ರೀಯಾದವಳು ಪ್ರತಿದಿನವೂ ಉತ್ಸಾಹದಿಂದ ಪತಿಸೇವೆಯನ್ನು ಮಾಡಬೇಕು. ಅವನ ಆಜ್ಞೆಯಂತೆ ಭಕ್ತಿಪೂರ್ವಕವಾಗಿ ಅವನ ಚರಣಾಮೃತ (ಪಾದೋದಕ)ವನ್ನು ಪಾನಮಾಡಬೇಕು. ಅದು ಅವಳಿಗೆ ಸದಾ ಅಭೀಷ್ಟಪ್ರದವಾಗಿದೆ.[1]

ವ್ರತ, ತಪಸ್ಸು, ದೇವಪೂಜೆ ಮುಂತಾದ ಕಾರ್ಯಗಳನ್ನು ಬಿಟ್ಟು ಮೊದಲು ಸ್ತ್ರೀಯು ಪತಿಯ ಚರಣಸೇವೆಯನ್ನು ಶ್ರದ್ಧೆಯಿಂದ ಮಾಡಬೇಕು. ಅವನನ್ನು ಒಳ್ಳೆಯ ಮಾತುಗಳಿಂದ ಸಂತುಷ್ಟಗೊಳಿಸಬೇಕು. ಮನೋಮಾಲಿನ್ಯದಿಂದ ಪತಿಯ ಆಜ್ಞೆಯ ವಿರುದ್ಧವಾಗಿ ಯಾವ ಕಾರ್ಯವನ್ನೂ ಸಾಧ್ವಿಯು ಮಾಡಬಾರದು.[2]

---

1. ನಿತ್ಯಂ ತು ಭರ್ತುರ್ಯೌತ್ಸುಕ್ಯಾತ್ ತತ್ಪಾದೋದಕಮೀಪ್ಸಿತಮ್ ।
ಭಕ್ತಿಭಾವೇನ ಸತತಂ ಭೋಕ್ತವ್ಯಂ ತದನುಜ್ಞಯಾ ॥ ಶ್ರೀಕೃಷ್ಣಜನ್ಮಖಂಡ83–111

2. ವ್ರತಂ ತಪಸ್ಯಾಂ ದೇವಾರ್ಚಾಂ ಪರಿತ್ಯಜ್ಯ ಪ್ರಯತ್ನತಃ।
ಕುರ್ಯಾಚ್ಚರಣಸೇವಾಂ ಚ ಸ್ತವನಂ ಪರಿತೋಷಣಮ್ ।
ತದಾಜ್ಞಾರಹಿತಂ ಕರ್ಮ ನ ಕುರ್ಯಾದ್ ವೈರತಃ ಸತೀ॥
ಶ್ರೀಕೃಷ್ಣಜನ್ಮ ಖಂಡ 83–112,113

ಸಾಧ್ವೀಸ್ತ್ರೀಯು ಪತಿಯನ್ನು ಸಾಕ್ಷಾತ್ ನಾರಾಯಣನಿಗಿಂತಲೂ ಹೆಚ್ಚೆಂದು ತಿಳಿದು ಯಾವಾಗಲೂ ಅವನನ್ನೇ ಧ್ಯಾನಿಸಬೇಕು. ಪರಪುರುಷರ ಮುಖವನ್ನು ನೋಡಬಾರದು. ವಸ್ತ್ರಾಲಂಕೃತರಾದ ಪರಪುರುಷರ ಕಡೆಗೆ ಕಣ್ಣೆತ್ತಿ ನೋಡಬಾರದು. ಪತಿವ್ರತಾ ಸ್ತ್ರೀಯು ಯಾತ್ರೆ ಮತ್ತು ಅನ್ಯವಾದ ಮಹೋತ್ಸವಗಳನ್ನಾಗಲೀ ಹಾಗೂ ನೃತ್ಯ, ಗಾಯನ, ಮೊದಲಾದ ಕ್ರೀಡಾ ವಿನೋದಗಳನ್ನಾಗಲೀ ಬೇರೆ ಪುರುಷರ ಹಾಸ್ಯ, ವಿಲಾಸ, ಕ್ರೀಡೆಗಳನ್ನಾಗಲೀ ಎಂದೂ ಕಣ್ಣೆತ್ತಿ ನೋಡಬಾರದು. [3]

ಪತಿಯು ಸೇವಿಸುವ ಆಹಾರವೇ ಸತಿಗೆ ಶ್ರೇಷ್ಠವಾದದ್ದು, ಪತಿವ್ರತೆಯಾದವಳು ಒಂದು ಕ್ಷಣಕೂಡ ತನ್ನ ಪತಿಯನ್ನು ಬಿಟ್ಟಿರಬಾರದು.[4]

ಸತಿಯು ತನ್ನ ಪತಿಗೆ ಎದುರುತ್ತರವನ್ನು ಕೊಡಬಾರದು. ತನ್ನ ಪತಿಯು ದೈಹಿಕವಾಗಿ ದಂಡಿಸಿದರೂ, ಸಿಟ್ಟಿಗೆದ್ದರೂ ಅವಳು ಪತಿಯ ಮೇಲೆ ಸಿಟ್ಟಿಗೇಳಬಾರದು.[5]

ತನ್ನ ಪ್ರಿಯನಾದ ಪತಿಯು ಹಸಿದಾಗ ಭೋಜನ ಮಾಡಿಸಬೇಕು. ಅವನಿಗೆ ಆಹಾರ ಪಾನೀಯಗಳನ್ನು ಆದರ ಪೂರ್ವಕವಾಗಿ ಅರ್ಪಿಸಬೇಕು. ಅವನು ನಿದ್ದೆ ಮಾಡುವಾಗ ಎಬ್ಬಿಸಬಾರದು ಹಾಗೂ ಯಾವುದೇ ಕೆಲಸ ಮಾಡಲು ಪ್ರೇರೇಪಿಸಬಾರದು. [6]

ಪುತ್ರರಿಗಿಂತಲೂ ನೂರರಷ್ಟು ಹೆಚ್ಚಾಗಿ ಪತಿಯನ್ನು ಸ್ತ್ರೀಯರು ಪ್ರೀತಿಸಬೇಕು. ಕುಲಸ್ತ್ರೀಯರಾದವರಿಗೆ ಪತಿಯೇ ಮಿತ್ರನೂ, ಗತಿಯೂ, ದೇವತೆಯೂ ಆಗಿರುತ್ತಾನೆ. [7]

---

3. ನಾರಾಯಣಾತ್ ಪರಂ ಕಾಂತಂ ಧ್ಯಾಯತೇ ಸತತಂ ಸತೀ ।
ಪರಪುಂಸಾಂ ಮುಖಂ ಚೈವ ಸುವೇಷ ಪುರುಷಂ ಪರಮ್ ॥
ಯಾತ್ರಾ ಮಹೋತ್ಸವಂ ನೃತ್ಯಂ ನರ್ತನಂ ಗಾಯನಂ ವ್ರಜಮ್ ।
ಪರಕ್ರೀಡಾಂ ಚ ಸತತಂ ನಹಿ ಪಶ್ಯತಿ ಸುವ್ರತಾ ॥ ಶ್ರೀ ಕೃಷ್ಣಜನ್ಮಖಂಡ 83-115
4. ಯದ್ ಭಕ್ಷ್ಯಂ ಸ್ವಾಮಿನೋ ನಿತ್ಯಂ ತದೇವಮಪಿ ಯೋಷಿತಾಮ್ ।
ನ ಹಿ ತ್ಯಜೇತ್ ತು ತತ್ಸಂಗಂ ಕ್ಷಣಮೇವ ಚ ಸುವ್ರತಾ । 83-116
5. ಉತ್ತರೇ ನೋತ್ತರಂ ದದ್ಯಾತ್ ಸ್ವಾಮಿನಶ್ಚ ಪತಿವ್ರತಾ ।
ನ ಕೋಪಂ ಕುರುತೇ ಶುದ್ಧಾ ತಾಡಿತಾ ಚಾಪಿ ಕೋಪಿತಾ ॥ 83-117
6. ಕ್ಷುಧಿತಂ ಭೋಜಯೇತ್ ಕಾಂತಂ ದದ್ಯಾತ್ ಪಾನಂ ಚ ಭೋಜನಮ್ ।
ನ ಬೋಧಯೇತ್ ತಂ ನಿದ್ರಾಲಂ ಪ್ರೇರಯೇನ್ನೈವ ಕರ್ಮಸು ॥ 83-118
7. ಪುತ್ರಾಣಾಂ ಚ ಶತಗುಣಂ ಸ್ನೇಹಂ ಕುರ್ಯಾತ್ ಪತಿಂ ಸತೀ ।
ಪತಿರ್ಬಂಧುರ್ಗತಿರ್ಭರ್ತಾ ದೈವತಂ ಕುಲಯೋಷಿತಃ ॥ 83-119

ಪತಿವ್ರತಾಸ್ತ್ರೀಯು ಪ್ರಾತಃಕಾಲದಲ್ಲಿ ಎದ್ದು ಕೈ ಕಾಲು ಮುಖ ತೊಳೆದು, ಪತಿಗೆ ಹಾಗೂ ಇಷ್ಟದೇವರಿಗೆ ನಮಸ್ಕರಿಸಬೇಕು. ಮನೆಯ ಅಂಗಳವನ್ನು ಶಗಣಿಯಿಂದ ಸಾರಿಸಿ ರಂಗವಲ್ಲಿಯಿಂದ, ಮಂಗಳ ದ್ರವ್ಯಗಳಿಂದ, ಅಲಂಕರಿಸಬೇಕು. ನಂತರ ಗೃಹ ಕಾರ್ಯಗಳನ್ನು ಮುಗಿಸಿ ಸ್ನಾನವಾದ ಮೇಲೆ ದೇವರಿಗೂ, ಬ್ರಾಹ್ಮಣರಿಗೂ, ಪತಿಗೂ ನಮಸ್ಕರಿಸಿ, ಮನೆದೇವರನ್ನು ಪೂಜಿಸಬೇಕು. ಆಮೇಲೆ ಉಳಿದ ಮನೆ ಕೆಲಸಗಳನ್ನು ಲೋಪವಿಲ್ಲದಂತೆ ಮಾಡಿ ಮುಗಿಸಿ ಪತಿಗೆ ಉಣಬಡಿಸಿ ಅತಿಥಿಗಳ ಸೇವೆ ಮಾಡಬೇಕು. ಎಲ್ಲರ ಊಟವಾದ ನಂತರ ತಾನು ಸ್ವತಃ ಸಂತೋಷದಿಂದ ಊಟ ಮಾಡಬೇಕು.[8]

ಸ್ತ್ರೀಯರಿಗೆ ಪತಿಯೇ ಬಂಧು, ಪತಿಯೇ ಗತಿ, ಪತಿಯೇ ದೈವ, ಹಾಗೂ ಪತಿಯೇ ಗುರು, ಅವನೇ ಸರ್ವಸ್ವವೂ ಆಗಿದ್ದಾನೆ. ಪತಿಗಿಂತ ಬೇರೆ ಗುರು ಇಲ್ಲವೇ ಇಲ್ಲ.[9]

ಯಾವ ಸ್ತ್ರೀಯು ವಿಷ್ಣುವಿಗೆ ಸಮಾನನಾದ ಪೂಜನೀಯನಾದ, ಸರ್ವಶ್ರೇಷ್ಠನಾದ ತನ್ನ ಪತಿಯನ್ನು ದ್ವೇಷಿಸುವಳೋ, ಅವಳು ಹದಿನಾಲ್ಕು ಇಂದ್ರರ ಆಯುಷ್ಯ ಸಮಾಪ್ತಿಯಾಗುವವರೆಗೂ ಕುಂಭೀಪಾಕ ನರಕದಲ್ಲಿ ಬೇಯುತ್ತಾಳೆ.[10]

ಪತಿಭಕ್ತಿರಹಿತಳಾದ ಸ್ತ್ರೀಗೆ ವ್ರತ ಉಪವಾಸ, ದಾನ ಸತ್ಯ ಪುಣ್ಯಾ ಬಹಳ ದಿನಗಳವರೆಗೆ ಮಾಡಿದ ತಪಸ್ಸು ಎಲ್ಲವೂ ಭಸ್ಮಿಭೂತವಾಗಿ ನಿರರ್ಥಕವೆನಿಸುತ್ತವೆ.[11]

ಸ್ತ್ರೀಯರಿಗೆ ಪತಿಸೇವೆಯೇ ವ್ರತವು, ಪತಿಸೇವೆಯೇ ಶ್ರೇಷ್ಠವಾದ ತಪಸ್ಸು, ಪತಿಸೇವೆಯೇ ಪರಮಧರ್ಮವು ಮತ್ತು ಪತಿಸೇವೆಯೇ ದೇವಪೂಜೆಯು, ಅವರಿಗೆ ಪತಿಸೇವೆಯೇ ಪರಮಸತ್ಯವು, ದಾನವು ಮತ್ತು ತೀರ್ಥಸೇವನೆಯಾಗಿದೆ. ಅವರಿಗೆ

---

8. ಸಾ. ಶುದ್ಧಾ ಪ್ರಾತರುತ್ಥಾಯ ನಮಸ್ಕೃತ್ಯ ಪತಿಂ ಸುರಮ್ ।
ಪ್ರಾಂಗಣೇ ಮಂಗಲಂ ದದ್ಯಾತ್ ಗೋಮಯೇನ ಜಲೇನ ಚ ॥
ಗೃಹಕೃತ್ಯಂ ಚ ಕೃತ್ವಾ ಚ ಸ್ನಾತ್ವಾSSಗತ್ಯ ಗೃಹಂ ಸತೀ ।
ಸುರಂ ವಿಪ್ರಂ ಪತಿಂ ನತ್ವಾ ಪೂಜಯೇತ್ ಗೃಹದೇವತಾಮ್ ॥
ಗೃಹಕೃತ್ಯಂ ಸುನಿರ್ವರ್ತ್ಯ ಭೋಜಯಿತ್ವಾ ಪತಿಂ ಸತೀ ।
ಅತಿಥಿಂ ಪೂಜಯಿತ್ವಾ ಚ ಸ್ವಯಂ ಭುಂಕ್ತೇ ಸುಖಂ ಸತೀ ॥ 84–15,16,17

9. ಪತಿರ್ಬಂಧುರ್ಗತಿರ್ಭರ್ತಾ ದೈವತಂ ಗುರುದೇವ ಚ ।
ಸರ್ವಸ್ಮಾಚ್ಚ ಪರಃಸ್ವಾಮೀ ನ ಗುರುಃ ಸ್ವಾಮಿನಃ ಪರಃ ॥ 57–11

10. ಯಾ ಸ್ತ್ರೀ ಸರ್ವಪರಂ ದ್ವೇಷ್ಟಿ ಪತಿಂ ವಿಷ್ಣುಸಮಂ ಗುರುಂ ।
ಕುಂಭೀಪಾಕೇ ಪಚತಿ ಸಾ ಯಾವದಿಂದ್ರಾಶ್ಚತುರ್ದಶ ॥ 57–15

11. ವ್ರತಂ ಚಾನಶನಂ ದಾನಂ ಸತ್ಯಂ ಪುಣ್ಯಾಂ ತಪಶ್ಚಿರಮ್ ।
ಪತಿಭಕ್ತಿವಿಹೀನಾ ಯಾ ಭಸ್ಮೀಭೂತಂ ನಿರರ್ಥಕಮ್ ॥ 57–16

ಪತಿಯೇ ಸರ್ವದೇವಮಯನು ಅವರಿಗೆ ಪತಿಯೇ ಜನಾರ್ದನನು ಅವನೇ ಸರ್ವಪುಣ್ಯ ಸ್ವರೂಪನಾಗಿದ್ದಾನೆ.[12]

ಸ್ತ್ರೀಯರಿಗೆ ಪತಿಯೇ ಗತಿಯು, ಪತಿಯೇ ಪ್ರಾಣವು. ಪತಿಯೇ ಸರ್ವಸಂಪತ್ತು ಪತಿಯೇ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಸಿದ್ಧಿಗೆ ಕಾರಣನು. ಈ ಸಂಸಾರ ಸಾಗರದಿಂದ ಪಾರಾಗುವ ಸೇತುರೂಪನು ಅವನೇ ಆಗಿದ್ದಾನೆ.[13]

ಸ್ತ್ರೀಯರಿಗೆ ಪತಿದೇವರೇ ಸಾಕ್ಷಾತ್ ನಾರಾಯಣನು ಅವನೇ ವ್ರತ ಮತ್ತು ಸನಾತನ ಧರ್ಮಸ್ವರೂಪನು, ಯಾವಳು ಪತಿಯಿಂದ ವಿಮುಖಳಾಗಿರುವಳೋ ಅವಳ ಕರ್ಮಗಳೆಲ್ಲವೂ ವ್ಯರ್ಥವಾಗುತ್ತವೆ.[14]

ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡುವುದು, ಸಮಸ್ತ ಯಜ್ಞಗಳಲ್ಲಿ ದಕ್ಷಿಣೆಕೊಡುವುದು, ಎಲ್ಲ ರೀತಿಯ ದಾನ ಮಾಡುವುದು, ಪುಣ್ಯ ಕರ್ಮಗಳನ್ನು ಮಾಡುವುದು, ಎಲ್ಲ ಪ್ರಕಾರದ ವ್ರತಗಳನ್ನು ಮಾಡುವುದು, ದೇವಪೂಜೆ, ಉಪವಾಸ, ತಪಸ್ಸು ಇವೆಲ್ಲ ಸೇರಿದರೂ, ಸತಿಗೆ ಪತಿಯ ಚರಣಸೇವೆಯ ಹದಿನಾರನೆಯ ಒಂದು ಭಾಗದಷ್ಟು ಫಲಕ್ಕೂ ಸಮವಾಗಲಾರವು.[15]

ಸ್ತ್ರೀಯರಿಗೆ ಎಲ್ಲ ಬಾಂಧವರಿಗಿಂತಲೂ ಪುತ್ರನು ಹೆಚ್ಚು. ಅವನು ಪತಿಯ ಅಂಶವೇ ಆಗಿರುತ್ತಾನೆ. (ಆತ್ಮಾವೈಪುತ್ರನಾಮಾಸಿ–ಶ್ರುತಿ) ಆದ್ದರಿಂದ ನೂರು ಜನ ಪುತ್ರರಿಗಿಂತಲೂ ಪತಿಯೇ ಶ್ರೇಷ್ಠನಾಗಿರುತ್ತಾನೆ.[16]

---

12 ಪತಿಸೇವಾ ವ್ರತಂ ಸ್ತ್ರೀಣಾಂ ಪತಿಸೇವಾ ಪರಂ ತಪಃ ।
ಪತಿಸೇವಾ ಪರೋಧರ್ಮಃ ಪತಿಸೇವಾ ಸುರಾರ್ಚನಮ್ ॥
ಪತಿಸೇವಾ ಪರಂ ಸತ್ಯಂ ದಾನ ತೀರ್ಥಾನುಸೇವನಮ್ ॥
ಸರ್ವದೇವಮಯಃ ಸ್ವಾಮೀ ಸರ್ವದೇವಮಯಃ ಶುಚಿಃ ॥
ಸರ್ವಪುಣ್ಯಸ್ವರೂಪಶ್ಚ ಪತಿರೂಪೀ ಜನಾರ್ದನಃ ॥ 57–18 ರಿಂದ 20

13. ಪತಿರೇವ ಗತಿಃ ಸ್ತ್ರೀಣಾಂ ಪತಿಃ ಪ್ರಾಣಾಶ್ಚ ಸಂಪದಃ ।
ಧರ್ಮಾರ್ಥಕಾಮ ಮೋಕ್ಷಾಣಾಂ ಹೇತುಃ ಸೇತುರ್ಭವಾರ್ಣವೇ ॥
ಬ್ರಹ್ಮಖಂಡ 9–64

14. ಪತಿರ್ನಾರಾಯಣಃ ಸ್ತ್ರೀಣಾಂ ವ್ರತಂ ಧರ್ಮಃ ಸನಾತನಃ ।
ಸರ್ವಂ ಕರ್ಮ ವೃಥಾ ತಾಸಾಂ ಸ್ವಾಮಿನಾಂ ವಿಮುಖಾಶ್ಚ ಯಾಃ ॥ 9–65

15. ಸ್ನಾನಂ ಚ ಸರ್ವತೀರ್ಥೇಷು ಸರ್ವಯಜ್ಞೇಷು ದಕ್ಷಿಣಾ ।
ಸರ್ವದಾನಾನಿ ಪುಣ್ಯಾನಿ ವ್ರತಾನಿ ನಿಯಮಾಶ್ಚ ಯೇ ॥
ದೇವಾರ್ಚನಂ ಚಾನಶನಂ ಸರ್ವಾಣಿ ಚ ತಪಾಂಸಿ ಚ ।
ಸ್ವಾಮಿನಃ ಪಾದಾಸೇವಾಯಾಃ ಕಲಾಂ ನಾರ್ಹಂತಿ ಷೋಡಶೀಮ್॥9–66–67

16. ಸರ್ವೇಷಾಂ ಬಾಂಧವಾನಾಂ ಚ ಪ್ರಿಯಃ ಪುತ್ರಶ್ಚ ಯೋಷಿತಾಮ್ ।
ಸ ಏವ ಸ್ವಾಮಿನೋಽಂಶಶ್ಚ ಶತಪುತ್ರಾತ್ ಪರಃ ಪತಿಃ ॥ 9–68

ಪತಿಯು ಪತಿತನಾಗಲೀ, ರೋಗಿಯಾಗಲೀ, ದುಷ್ಟನಾಗಲೀ, ನಿರ್ಧನನಾಗಲೀ, ಗುಣಹೀನನಾಗಲೀ,ಯುವಕನಾಗಲೀ, ವೃದ್ಧನಾಗಲೀ, ಪತ್ನಿಯು ಅವನ ಸೇವೆಯನ್ನು ಮಾಡುತ್ತಾ ಇರಬೇಕು. ಅವನನ್ನು ಪರಿತ್ಯಾಗ ಮಾಡಬಾರದು.[17]

ಯಾವ ಸ್ತ್ರೀಯು ಗುಣವಂತನಾಗಲೀ, ಗುಣಹೀನನಾಗಲೀ, ಅಂತಹ ಪತಿಯನ್ನು ದ್ವೇಷಿಸುವಳೋ, ಅಥವಾ ಪರಿತ್ಯಾಗಮಾಡುವಳೋ, ಅವಳು ಸೂರ್ಯಚಂದ್ರರಿರುವಷ್ಟು ಕಾಲದವರೆಗೆ ಕಾಲಸೂತ್ರವೆಂಬ ನರಕದಲ್ಲಿ ಬೇಯಿಸಲ್ಪಡುತ್ತಾಳೆ.[18]

---

17. ಪತಿತಂ ರೋಗಿಣಂ ದುಷ್ಟಂ ನಿರ್ಧನಂ ಗುಣಹೀನಕಮ್ ।
ಯುವಾನಂ ಚೈವ ವೃದ್ಧಂ ವಾ ಭಜೇತ್ತಂ ನ ತ್ಯಜೇತ್ ಸತೀ ॥ 9–70
18. ಸಗುಣಂ ನಿರ್ಗುಣಂ ವಾಪಿ ದ್ವೇಷ್ಟಿ ಯಾ ಸಂತ್ಯಜೇತ್ಪತಿಮ್ ।
ಪಚ್ಯತೇ ಕಾಲಸೂತ್ರೇ ಸಾ ಯಾವಚ್ಚಂದ್ರದಿವಾಕರೌ ॥ 9–71

****

# ಶ್ರೀಸ್ಕಂದಪುರಾಣದಲ್ಲಿ ಸ್ತ್ರೀಧರ್ಮಗಳು

ಪತಿಯ ಸಮ್ಮತಿ ಇಲ್ಲದೇ ಯಾವ ಸ್ತ್ರೀಯು ವ್ರತ, ಉಪವಾಸಗಳನ್ನು ಮಾಡುವಳೋ, ಅವೆಲ್ಲವೂ ವ್ಯರ್ಥವಾಗುತ್ತವೆ ಮತ್ತು ಪತಿಯ ಆಯುಷ್ಯ ಕ್ಷೀಣ ಮಾಡುವವು. ಆ ಸ್ತ್ರೀಯು ಸತ್ತ ಮೇಲೆ ನರಕ ಹೊಂದುವಳು.[1]

ಪತಿಯ ಮಾತಿಗೆ ಸಿಟ್ಟಿನಿಂದ ಉತ್ತರಕೊಟ್ಟ ಸ್ತ್ರೀಯು ಊರಲ್ಲಿ ನಾಯಿಯಾಗಿ ಹುಟ್ಟುವಳು ಅಥವಾ ಕಾಡಿನಲ್ಲಿ ನರಿಯಾಗಿ ಜನಿಸುವಳು.[2]

ಪ್ರತಿದಿನವೂ ಪತಿಯ ಪಾದಪೂಜೆಯನ್ನು ಮಾಡಿಯೇ ಸತಿಯು ಭೋಜನ ಮಾಡಬೇಕು. ಇದು ಸ್ತ್ರೀಯರ ಶ್ರೇಷ್ಠವಾದ ನಿಯಮವೆಂದು ಹೇಳಲ್ಪಟ್ಟಿದೆ.[3]

---

1. ವ್ರತೋಪವಾಸನಿಯಮಂ ಪತಿಮುಲ್ಲಂಘ್ಯ ಯಾ ಚರೇತ್ ।
ಆಯುಷ್ಯಂ ಹರತೇ ಭರ್ತುಃ ಮೃತಾ ನಿರಯಮೃಚ್ಛತಿ॥ ಧರ್ಮಾರಣ್ಯ ಮಹಾತ್ಮೆ

2. ಉಕ್ತಾ ಪ್ರತ್ಯುತ್ತರಂ ದದ್ಯಾನ್ನಾರೀ ಯಾ ಕ್ರೋಧತತ್ಪರಾ ।
ಸರಮಾ ಜಾಯತೇ ಗ್ರಾಮೇ ಶೃಗಾಲೀ ನಿರ್ಜನೇ ವನೇ ॥ "

3. ಸ್ತ್ರೀಣಾಂ ಹಿ ಪರಮಶ್ಚೈಕೋ ನಿಯಮಃ ಸಮುದಾಹೃತಃ ॥ "
ಅಭ್ಯರ್ಚ್ಯ ಚರಣೌ ಭರ್ತುರ್ಭೋಕ್ತವ್ಯಂ ಕೃತನಿಶ್ಚಯಾ ॥ "

ಸತಿಯು ಪತಿಗಿಂತ ಎತ್ತರ ಆಸನದಲ್ಲಿ ಕುಳಿತುಕೊಳ್ಳಬಾರದು. ಹೆರವರ ಮನೆಗೆ ಅವಳು ಹೋಗಬಾರದು. ಅಲ್ಲಿ ಎಂದಿಗೂ ಬಿರುನುಡಿಗಳನ್ನಾಡಬಾರದು.[4]

ಯಾವ ಸ್ತ್ರೀಯು ದುರ್ಬುದ್ಧಿಯಿಂದ ಪತಿಯನ್ನು ಬಿಟ್ಟು ತಾನೊಬ್ಬಳೇ ಏಕಾಂತದಲ್ಲಿ ತಿರುಗುವಳೋ, ಅವಳು ಮುಂದಿನ ಜನ್ಮದಲ್ಲಿ ಗಿಡದ ಪೊದರಿನಲ್ಲಿ ವಾಸಿಸುವ ಕ್ರೂರಗೂಗೆಯಾಗಿ ಜನಿಸುವಳು.[5]

ಯಾವ ಸ್ತ್ರೀಯು ಪತಿಯನ್ನು ಬಿಟ್ಟು ಒಬ್ಬಳೇ ಭಕ್ಷ್ಯಭೋಜ್ಯ ಮೊದಲಾದವುಗಳನ್ನು ತಿನ್ನುವಳೋ ಅವಳು ಊರಲ್ಲಿ ಮಲತಿನ್ನುವ ಹಂದಿಯಾಗಿ ಹುಟ್ಟುವಳು ಅಥವಾ ಮೇಕೆಯಾಗಿ ಹುಟ್ಟುವಳು.[6]

ಅಣ್ಣ ತಮ್ಮಂದಿರು, ಮಕ್ಕಳು, ತಂದೆ ಇವರೆಲ್ಲರೂ ಸ್ತ್ರೀಗೆ ಮಿತವಾಗಿ ಎಣಿಸಿಯೇ ಲೆಕ್ಕ ಮಾಡಿಯೇ ಹಣವನ್ನು ಕೊಡುವರು. ಲೆಕ್ಕವಿಲ್ಲದೇ, ಅಪರಿಮಿತ, ಬೇಕಾದಷ್ಟು, ಬೇಡಿದಷ್ಟು ಹಣವನ್ನು ಕೊಡುವ ಪತಿಯನ್ನು ಯಾವ ನಾರಿಯು ಪೂಜಿಸಲಿಕ್ಕಿಲ್ಲ ? ನಿಶ್ಚಿತವಾಗಿ ಪೂಜಿಸುವಳು.[7]

ಪತಿವ್ರತೆಯಾದ ಸತಿಯು ತನ್ನ ತಾಯಿ, ತಂದೆ ಹಾಗೂ ಗಂಡ ಈ ಮೂರು ಮನೆತನಗಳ, ಹಿಂದು ಮುಂದಿನ ಮೂರು ತಲೆಮಾರಿನವರೆಲ್ಲರೂ ತನ್ನ ಪುಣ್ಯದಿಂದ ಸ್ವರ್ಗ ಸುಖವನ್ನು ಅನುಭವಿಸುವಂತೆ ಮಾಡುತ್ತಾಳೆ. ಇಂಥ ಪತಿವ್ರತೆಯಾದ ಸತಿಯನ್ನು ಪಡೆದ ಪತಿಯೇ ಧನ್ಯನು.[8]

****

---

4. ಉಚ್ಚಾಸನಂ ನ ಸೇವೇತ ನ ವ್ರಜೇತ್ ಪರವೇಶ್ಮಸು ।
ತತ್ರ ಪಾರುಷ್ಯವಾಕ್ಯಾನಿ ಬ್ರೂಯಾನ್ನೈವ ಕದಾಚನ ॥

ಧರ್ಮಾರಣ್ಯ ಮಹಾತ್ಮೆ

5. ಯಾ ಭರ್ತಾರಂ ಪರಿತ್ಯಜ್ಯ ರಹಶ್ಚರತಿ ದುರ್ಮತಿಃ ।
ಉಲೂಕೀ ಜಾಯತೇ ಕ್ರೂರಾ ವೃಕ್ಷಕೋಟರ ಶಾಯಿನೀ ॥ "

6. ಯಾ ಭರ್ತಾರಂ ಪರಿತ್ಯಜ್ಯ ಮಿಷ್ಟಮಶ್ನಾತಿ ಕೇವಲಮ್ ।
ಗ್ರಾಮೇ ಸಾ ಸೂಕರೀಭೂಯಾದ್ವಲ್ಗುಲೀ ವಾಥ ವಿಡ್‌ಭುಜಃ ॥ "

7. ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ।
ಅಮಿತಸ್ಯ ಹಿ ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥ "

8. ಧನ್ಯಃ ಸ ಚ ಪತಿಃ ಶ್ರೀಮಾನ್ ಯೇಷಾಂ ಗೇಹೇ ಪತಿವ್ರತಾ ।
ಪಿತೃವಂಶ್ಯಾ ಮಾತೃವಂಶ್ಯಾಃ ಪತಿವಂಶ್ಯಾಸ್ತ್ರಯಸ್ತ್ರಯಃ ॥
ಪತಿವ್ರತಾಯಾಃ ಪುಣ್ಯೇನ ಸ್ವರ್ಗಸೌಖ್ಯಾನಿ ಭುಂಜತೇ ॥ "

# ಶ್ರೀವರಾಹಪುರಾಣದಲ್ಲಿ ಸ್ತ್ರೀಧರ್ಮಗಳು

ಪತಿಯಿಂದ ಅಪಮಾನಿತಳಾದರೂ ಅವನಿಗೆ ಪ್ರತ್ಯುತ್ತರವನ್ನು ಕೊಡದ ಪರಮಶೋಭಿತಳಾದ ಪತಿವ್ರತಾ ಸಾಧ್ವೀಸ್ತ್ರೀಯು ದೇವತೆಗಳಿಂದಲೂ ಪೂಜಾರ್ಹಳಾಗಿದ್ದಾಳೆ.[1]

ಯಾವ ಪತಿವ್ರತಾ ಸ್ತ್ರೀಯು ಪ್ರತಿನಿತ್ಯ ಪತಿಗೆ ಪ್ರಿಯವಾದ ಮತ್ತು ಹಿತವಾದ ಕಾರ್ಯದಲ್ಲಿ ತೊಡಗಿರುವಳೋ, ಪತಿಯನ್ನು ಅನುಸರಿಸಿ ಅವನ ಜೊತೆ ಜೊತೆಯಲ್ಲಿಯೇ ನಡೆಯುವಳೋ, ಅವಳಿಗೆ ಯಮಪುರಿಯ ದರ್ಶನವಾಗುವದಿಲ್ಲ.[2]

ಯಾವ ಪತಿವ್ರತಾ ಸ್ತ್ರೀಯು "ಪತಿಯೇ ನನ್ನ ತಂದೆ, ತಾಯಿ, ಬಂಧು, ದೇವರು" ಎಂದು ತಿಳಿದು ಅವನ ಸೇವೆ ಮಾಡುವಳೋ ಅವಳು ಯಮರಾಜನನ್ನು ಗೆಲ್ಲುತ್ತಾಳೆ.[3]

ಯಾವ ಪತಿವ್ರತಾ ಸ್ತ್ರೀಯು ಯಾವಾಗಲೂ ಪತಿಯ ಧ್ಯಾನವನ್ನೇ ಮಾಡುವಳೋ, ಪತಿಯ ಹಿಂದೆಯೇ ನಡೆಯುವಳೋ, ಅವನ ಹಿತವನ್ನೇ ಚಿಂತಿಸುವಳೋ, ಅವಳು, ಯಮರಾಜನ ದ್ವಾರವನ್ನೇ ನೋಡುವುದಿಲ್ಲ. ಯಮರಾಜನು ಅವಳ ಮುಂದೆ ಕೈ ಜೋಡಿಸಿ ನಿಂತಿರುತ್ತಾನೆ.[4]

ಸ್ನಾನ ಮಾಡುವಾಗ, ನಿಂತಿರುವಾಗ,ತನ್ನನ್ನು ಸಿಂಗರಿಸಿಕೊಳ್ಳುವಾಗ, ಮನಸ್ಸಿನಲ್ಲೂ ಸಹ ಪತಿಯ ಹೊರತು ಅನ್ಯರನ್ನು ನೆನೆಯುವದಿಲ್ಲವೋ, ಅಂಥ ಪತಿವ್ರತಾ ಸ್ತ್ರೀಯು ಯಮರಾಜನ ದ್ವಾರವನ್ನು ನೋಡುವದಿಲ್ಲ.[5]

---

1. ದೇವಾನಾಮಪಿ ಸಾ ಸಾಧ್ವೀ ಪೂಜ್ಯಾ ಪರಮಶೋಭನಾ ।
ಭರ್ತ್ರಾಚಾಭಿಹಿತಾ ಯಾಪಿ ನ ಪ್ರತ್ಯಾಖ್ಯಾಯಿನೀ ಭವೇತ್॥ 209ಅ–7 ಶ್ಲೋಕ
2. ಏವಂ ಯಾತು ಭವೇನ್ನಿತ್ಯಂ ಭರ್ತುಃ ಪ್ರಿಯಹಿತೇ ರತಾ ॥
ಅನುವೇಷ್ವನ ಭಾವೇನ ಭರ್ತಾರಮನುಗಚ್ಛತಿ ।
ಸಾ ತು ಮೃತ್ಯುಮುಖದ್ವಾರಂ ನ ಗಚ್ಛೇದ್ ಬ್ರಹ್ಮಸಂಭವ ॥ 209–10
3. ಏಷ ಮಾತಾ ಪಿತಾ ಬಂಧುರೇಷ ಮೇ ದೈವತಂ ಪರಮ್ ।
ಏವಂ ಶುಶ್ರೂಷತೇ ಯಾತು ಸಾ ಮಾಂ ವಿಜಯತೇ ಸದಾ ॥ 209–11
4. ಪತಿವ್ರತಾ ತು ಯಾ ಸಾಧ್ವೀ ತಸ್ಯಾಂ ಚಾಹಂ ಕೃತಾಂಜಲಿಃ ।
ಭರ್ತಾರಮನುಧ್ಯಾಯಂತೀ ಭರ್ತಾರಮನುಗಚ್ಛತಿ ॥
ಭರ್ತಾರಮನುಶೋಚಂತೀ ಮೃತ್ಯುದ್ವಾರಂ ನ ಪಶ್ಯತಿ ॥ 209–15
5. ಸ್ನಾಂತೀ ಚ ತಿಷ್ಠತೀ ವಾಪಿ ಕುರ್ವಂತೀ ವಾ ಪ್ರಸಾಧನಮ್ ।
ನಾನ್ಯಂ ಯಾ ಮನಸಾ ಪಶ್ಯೇತ್ ಮೃತ್ಯುದ್ವಾರಂ ನ ಪಶ್ಯತಿ ॥ 209–15

ಯಾವ ಪತಿವ್ರತಾ ಸ್ತ್ರೀಯ ಕಣ್ಣು, ಶರೀರ, ಭಾವಗಳು ಯಾವಾಗಲೂ ಮುಚ್ಚಿರುವವೋ ಮತ್ತು ಯಾವ ಸ್ತ್ರೀಯು ಶೌಚಾಚಾರ ಸಂಪನ್ನಳಾಗಿರುವಳೋ ಅವಳು ಯಮರಾಜನನ್ನು ನೋಡುವದಿಲ್ಲ.[6]

ಯಾವ ಪತಿವ್ರತಾ ಸ್ತ್ರೀಯು ಪತಿಯನ್ನೇ ನೋಡುತ್ತಿರುವಳೋ, ಅವನ ಮನಸ್ಸಿನಂತೆ ನಡೆಯುವಳೋ, ಪತಿಯ ಹಿತೈಷಿಯಾಗಿರುವಳೋ, ಅವಳು ಯಮರಾಜನನ್ನು ನೋಡುವದಿಲ್ಲ.[7]

---

6. ಚಕ್ಷುರ್ದೇಹಶ್ಚ ಭಾವಶ್ಚ ಯಸ್ಯಾಂ ನಿತ್ಯಂ ಸುಸಂವೃತಮ್ ।
ಶೌಚಾಚಾರ ಸಮಾಯುಕ್ತಾ ಸಾಪಿ ಮೃತ್ಯುಂ ನ ಪಶ್ಯತಿ ॥ 209–16

7. ಭರ್ತುರ್ಮುಖಂ ಪ್ರಪಶ್ಯೇದ್ ಯಾ ಭರ್ತುಶ್ಚಿತ್ತಾನುಸಾರಿಣೀ ।
ವರ್ತತೇ ಚ ಹಿತೇ ಭರ್ತುರ್ಮೃತ್ಯುದ್ವಾರಂ ನ ಪಶ್ಯತಿ ॥ 209–19

****

# ಶ್ರೀಆಗ್ನೇಯಪುರಾಣದಲ್ಲಿ ಸ್ತ್ರೀಧರ್ಮಗಳು

ಶ್ರೀ ಸರಸ್ವತೀದೇವಿಯರು ಲೋಪಾಮುದ್ರಾಳನ್ನು ಕುರಿತು ಪಾತಿವ್ರತ್ಯ ಧರ್ಮಗಳನ್ನು ಉಪದೇಶ ಮಾಡಿರುತ್ತಾರೆ. ಅವರ ವಾಣಿಯಲ್ಲಿ ಆ ಧರ್ಮಗಳನ್ನು ಇಲ್ಲಿ ತಿಳಿಸಲಾಗಿದೆ.

ಹೇ ಮಂಗಳಕರಳೇ ! ನೀನು ಲೋಕಕ್ಕೆ ತಾಯಿಯಾಗಿರು, ಪತಿವ್ರತಾ ಸ್ತ್ರೀಯರಲ್ಲಿ ಅಗ್ರಗಣ್ಯಳಾಗು, ನಿನ್ನ ಪತಿಯು ಕೋಪಿಸಿಕೊಂಡು ನಿನ್ನನ್ನು ಗದರಿಸಿದರೂ ಪತಿಯ ಎದುರಿಗೆ ನಿಂತು ಅವನಿಗೆ ವಿಪ್ರಿಯವಾದುದನ್ನು ಯಾವ ಕಾಲದಲ್ಲೂ ಹೇಳಬೇಡ [1]

ಯಾವ ಕಾಲದಲ್ಲಿಯೂ ದುಷ್ಟ ಸ್ತ್ರೀಯರ ಹತ್ತಿರ ಹೋಗಬೇಡ. ಆಪತ್ಕಾಲದಲ್ಲೂ ಸತ್ಯವನ್ನೇ ಹೇಳು. ಯಾವಾಗಲೂ ಮೃದುವಾಗಿ ಮಾತಾಡು. ಮಂಗಳಪ್ರದವಾದ ಶ್ರೀಹರಿಯ ಚರಿತ್ರೆಯನ್ನು ಹೇಳು.[2]

---

1. ಭದ್ರೇದೇವಿ ತ್ವಂ ಹಿ ಲೋಕಸ್ಯಮಾತಾ
ಸಾಧ್ವೀನಾಮಪ್ಯಗ್ರಗಣ್ಯಾ ಭವಸ್ವ ।
ಮಾ ಬ್ರೂಯಾಸ್ತ್ವಂ ವಿಪ್ರಿಯಂ ಭರ್ತುರಗ್ರೇ
ಕ್ರುದ್ಧೇ ಪತ್ಯೌ ಭರ್ತ್ಸಿತಾ ವಾ ಕದಾಪಿ ॥

2. ಮಾ ದುಷ್ಟಾನಾಂ ಗಚ್ಛ ಪಾರ್ಶ್ವಂ ಕದಾಪಿ
ಸ್ತ್ರೀಣಾಂ ಬ್ರೂಯಾಃ ಸತ್ಯಮೇವಾSSಪದಿತ್ವಂ ।
ವದಸ್ವ ವಾಚಾ ಮೃದುಚೈವ ಸರ್ವದಾ
ಶೃಣುಷ್ವ ವಿಷ್ಣೋಶ್ಚರಿತಂ ಶುಭಾವಹಮ್ ॥

ಸರ್ವದಾ ಶ್ರೀಹರಿಯ ಪಾದಕಮಲವನ್ನು ಸ್ಮರಿಸು. ನಿನ್ನ ಪತಿಯ ಸುಗುಣಗಳನ್ನು ನಿನ್ನ ಆಪ್ತರಲ್ಲಿ ಹೇಳುತ್ತಿರು.[3]

ಮನೆಯ ಪದಾರ್ಥಗಳನ್ನು ಸಂಗ್ರಹಿಸುವುದರಲ್ಲಿ ದಕ್ಷಳಾಗಿ ಇರು. ಇಷ್ಟಪ್ರದನಾದ ಶ್ರೀಹರಿಯ ನಾಮತ್ರಯ (ಅಚ್ಯುತ, ಅನಂತ, ಗೋವಿಂದ)ಗಳನ್ನು ಸರ್ವದಾ ಭಜಿಸು, ಧರ್ಮದ ವಿಷಯವಾಗಿ ನಿನ್ನ ಪತಿಯನ್ನು ಕೇಳು, ನಿನ್ನ ಪತಿಯ ಪಾದಕಮಲಗಳನ್ನು ಭಕ್ತಿಯಿಂದ ಸರ್ವದಾ ಧ್ಯಾನಿಸುತ್ತಿರು.[4]

ಕೆಲಸದ ನಿಮಿತ್ತವಾಗಿ ನಿನ್ನ ಪತಿಯು ಮನೆಬಿಟ್ಟು ಹೊರಗೆ ಹೋದಾಗ ನೀನು ಜಾಗರೂಕಳಾಗಿ ಅಗ್ನಿಯನ್ನು ರಕ್ಷಿಸು. (ಅಗ್ನಿಹೋತ್ರ ಇಟ್ಟಲ್ಲಿ) ಎಚ್ಚರಿಕೆಯಿಂದ ಮನೆಗೆ ಬಂದ ಅತಿಥಿಗಳ ಸತ್ಕಾರವನ್ನು ಮಾಡು. ಒಂದೇ ಮನಸ್ಸಿನಿಂದ ಅನುಸಂಧಾನ ಪೂರ್ವಕ ಭಗವತ್ಕಾರ್ಯಗಳನ್ನು ಮಾಡುವವಳಾಗು.[5]

ರಾತ್ರಿ ಕಾಲದಲ್ಲಿ ಪತಿಯು ಮಲಗಿದ ನಂತರ ಪತಿ ಪಾದದ ಹತ್ತಿರವೇ ಮಲಗಿ ನಿದ್ರಿಸು. ಬೆಳಗಿನ ಝಾವದಲ್ಲಿ ನಿನ್ನ ಪತಿಯು ಏಳುವದಕ್ಕಿಂತ ಮುಂಚಿತವಾಗಿ ಏಳು.[6]

ಸಂಧ್ಯಾಕಾಲದಲ್ಲಿ ಯಾವ ಸ್ತ್ರೀಯು ಮನೆ ಕಸವನ್ನು ಬಳಿಯುವದಿಲ್ಲವೋ ಅವಳು ಪ್ರತಿ ಜನ್ಮದಲ್ಲೂ ದರಿದ್ರಳಾಗುವಳು. ಮತ್ತು ಪತಿಹೀನಳೂ ಆಗುವಳು.[7]

****

---

3. ವೃಣೀಷ್ವ ವಿಷ್ಣೋಃ ಪದಪಂಕಜಂ ಸದಾ
ಗೃಹ್ಣೀಷ್ವವಾಚಂ ಪತಿಭೂಷಣಂ ಸದಾ॥

4. ಭಜಸ್ವ ದಾಕ್ಷ್ಯಂ ಗೃಹವಸ್ತುಸಂಗ್ರಹೇ
ಭಜಸ್ವ ನಾಮತ್ರಯಮಿಷ್ಟದಂ ಹರೇಃ।
ಪೃಚ್ಛಸ್ವ ಧರ್ಮಾನ್ ಪತಿಮೇವ ಸರ್ವದಾ
ಧ್ಯಾಯಸ್ವ ಭಕ್ತ್ಯಾ ಪತಿಪಾದಪಂಕಜಂ ॥

5. ವಿನಿರ್ಗತೇ ಭರ್ತರಿ ಕಾರ್ಯಹೇತುನಾ ತ್ವಂ ಜಾಗರೂಕಾ ಭವ ವಹ್ನಿರಕ್ಷಣೇ ।
ಭವಾತಿಥೇಯಾ ಚ ಭಯಾನ್ವಿತಾ ಬಹಿಃ ಸುಸಾವಧಾನಾ ಭವ ವಿಷ್ಣುಕಾರ್ಯೇ ॥

6. ಶಯಿಷ್ವ ಪಶ್ಚಾತ್ಪತಿಪಾದಪಂಕಜೇ ಬುಧ್ಯಸ್ವ ಭರ್ತುಸ್ಸಭಯಾ ಪುರೈವ ।

7. ಸಂಧ್ಯಾಕಾಲೇತು ಸಂಪ್ರಾಪ್ತೇ ಮಾರ್ಜನಂ ನ ಕರೋತಿ ಯಾಃ ।
ಭರ್ತೃಹೀನಾ ಭವೇತ್ ಸಾ ಚ ನಿಸ್ವಾ ಜನ್ಮನಿ ಜನ್ಮನಿ ॥

# ಶ್ರೀಮನುಸ್ಮೃತಿಯಲ್ಲಿ ಸ್ತ್ರೀಧರ್ಮಗಳು

ಸ್ತ್ರೀಯಾದವಳು ಮನೆಯಲ್ಲಿ ಸದಾ ಹಸನ್ಮುಖಿಯಾಗಿರಬೇಕು. ಮನೆಯ ಕೆಲಸಗಳಲ್ಲಿ ಜಾಣೆಯಾಗಿರಬೇಕು. ಪಾತ್ರೆಗಳನ್ನು ಚೆನ್ನಾಗಿ ತೊಳೆದು ಸ್ವಚ್ಛವಾಗಿಡಬೇಕು. ಮುಕ್ತ ಹಸ್ತದಿಂದ ಹಣ ಖರ್ಚುಮಾಡದೇ ಮಿತವ್ಯಯಿಯಾಗಿರಬೇಕು. ಇದರಿಂದ ಪತಿಯು ಪ್ರಸನ್ನಚಿತ್ತನಾಗಿ ಜೀವನವು ಸುಖಮಯವಾಗುತ್ತದೆ.[1]

ಪತಿಯಾದವನು ಸದಾಚಾರಶೂನ್ಯನಾಗಿರಲಿ, ಅನ್ಯಸ್ತ್ರೀಯಲ್ಲಿ ಅನುರಕ್ತನಾಗಿರಲಿ, ವಿದ್ಯಾದಿಗುಣಹೀನನಾಗಿರಲಿ, ಸಾಧ್ವಿಯಾದ ಸತಿಯು ಅವನನ್ನು ದೇವರಂತೆ ಆರಾಧಿಸತಕ್ಕದ್ದು, ಉಪಚರಿಸತಕ್ಕದ್ದು.[2]

ಸ್ತ್ರೀಯರಿಗೆ ಪ್ರತ್ಯೇಕವಾದ ಯಜ್ಞ, ವ್ರತ, ಉಪವಾಸಗಳು ವಿಧಿಸಲ್ಪಟ್ಟಿಲ್ಲ. ಪತಿಶುಶ್ರೂಷೆಯನ್ನು ಮಾಡುವ ಮೂಲಕವೇ ಅವರು ಸ್ವರ್ಗದಲ್ಲಿ ಪೂಜಿತರಾಗುತ್ತಾರೆ. (ಏಕಾದಶೀ, ಕೃಷ್ಣಾಷ್ಟಮೀ ಚಾತುರ್ಮಾಸ್ಯಾದಿ ವ್ರತಗಳು ಸ್ತ್ರೀಯರಿಗೂ ಕಡ್ಡಾಯವೆಂಬುದನ್ನು ಗಮನಿಸಬೇಕು)[3]

ಮಕ್ಕಳನ್ನು ಪಡೆಯುವುದು, ಅವರನ್ನು ಚೆನ್ನಾಗಿ ಸಂರಕ್ಷಿಸುವುದು, ಮತ್ತು ಪ್ರತಿನಿತ್ಯ ಸಂಸಾರವನ್ನು ನಿರ್ವಹಿಸುವದು, ಇವು ಸ್ತ್ರೀಯರ ಪಾಲಿನ ಮುಖ್ಯಧರ್ಮಗಳು.[4]

ಹಣವನ್ನು ಸಂಗ್ರಹಿಸುವ, ಹಾಗೂ ಅದನ್ನು ಯೋಗ್ಯ ರೀತಿಯಲ್ಲಿ ವೆಚ್ಚ ಮಾಡುವಕಾರ್ಯದಲ್ಲಿ ಪತಿಯು ತನ್ನ ಪತ್ನಿಯನ್ನು ನಿಯೋಜಿಸಬೇಕು. ಮನೆಯ ಶುದ್ಧಿ, ಧರ್ಮಕಾರ್ಯ, ಅಡಿಗೆ ಪಾತ್ರೆ ಮೊದಲಾದವುಗಳ ಮೇಲ್ವಿಚಾರಣೆ ಮುಂತಾದ ಕಾರ್ಯಗಳಲ್ಲಿ ಪತ್ನಿಯನ್ನು ತೊಡಗಿಸಬೇಕು.[5]

---

1. ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇಷು ದಕ್ಷಯಾ ।
ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತಹಸ್ತಯಾ ॥ 5–150
2. ವಿಶೀಲಃ ಕಾಮವೃತ್ತೋವಾ ಗುಣೈರ್ವಾ ಪರಿವರ್ಜಿತಃ ।
ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ ॥ 5–154
3. ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಣಮ್ ।
ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ ॥ 5–155
4. ಉತ್ಪಾದನಮಪತ್ಯಸ್ಯ ಜಾತಸ್ಯ ಪರಿಪಾಲನಮ್ ।
ಪ್ರತ್ಯಹಂ ಲೋಕಯಾತ್ರಾಯಾಃ ಪ್ರತ್ಯಕ್ಷಂ ಸ್ತ್ರೀ ನಿಬಂಧನಮ್ ॥ 9–27
5. ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್ ।
ಶೌಚೇ ಧರ್ಮೇಽನ್ನಪಕ್ತ್ಯಾಂ ಚ ಪಾರಿಣಾಹ್ಯಸ್ಯ (ವೇ)ಚೇಕ್ಷಣೇ ॥ 9–11

ಮದ್ಯಪಾನ, ದುಷ್ಟ ಜನರ ಸಹವಾಸ, ಪತಿವಿರಹ, ಅಲೆದಾಟ, ಅತಿನಿದ್ರೆ ಮತ್ತು ಪರಗೃಹವಾಸ ಈ ಆರೂ ಸ್ತ್ರೀಯರು ಕೆಡಲು ಕಾರಣವಾಗುತ್ತವೆ. ಕಾರಣ ಸ್ತ್ರೀಯರು ಇವುಗಳಿಂದ ದೂರವಿರುವುದೇ ಶ್ರೇಷ್ಠ ಧರ್ಮವಾಗಿದೆ.[6]

ಮನಸ್ಸು, ಮಾತು ಮತ್ತು ದೇಹ ಈ ಮೂರರಿಂದ ಪತಿಗೆ ದ್ರೋಹ ಬಗೆಯದ ಸ್ತೀಯು, ಪತಿಯು ಪಡೆಯುವ ಶ್ರೇಷ್ಠಲೋಕಗಳನ್ನೇ ತಾನು ಪಡೆಯುತ್ತಾಳೆ. ಸಜ್ಜನರಿಂದ "ಸಾಧ್ವೀ" ಎಂಬುದಾಗಿ ಕರೆಯಲ್ಪಡುತ್ತಾಳೆ.[7]

ಬಾಲ್ಯದಲ್ಲಿ ತಂದೆಯು ರಕ್ಷಿಸುತ್ತಾನೆ, ಯೌವನದಲ್ಲಿ ಪತಿಯು ರಕ್ಷಿಸುತ್ತಾನೆ. ವೃದ್ಧಾಪ್ಯದಲ್ಲಿ ಮಕ್ಕಳು ರಕ್ಷಿಸುತ್ತಾರೆ. ಸ್ತ್ರೀಯು ತನ್ನ ರಕ್ಷಣೆಯ ವಿಷಯದಲ್ಲಿ ಸ್ವಾತಂತ್ರ್ಯವಹಿಸುವದು ಉಚಿತವಲ್ಲ.[8]

****

---

6. ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಽಟನಮ್ ।
ಸ್ವಪ್ನೋಽನ್ಯಗೇಹವಾಸಶ್ಚ ನಾರೀ ಸಂದೂಷಣಾನಿ ಷಟ್ ॥ 9–13

7. ಪತಿಂ ಯಾ ನಾಭಿಚರತಿ ಮನೋವಾಗ್ದೇಹ ಸಂಯುತಾ ।
ಸಾ ಭರ್ತೃಲೋಕಾನಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ॥ 9–29

8. ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ 9–3

# ಭಾಗ–2

## ಶ್ರೀಪದ್ಮಪುರಾಣದಲ್ಲಿ ವಿಧವಾಸ್ತ್ರೀಯರ ಧರ್ಮಗಳು

ಬ್ರಾಹ್ಮಣಸ್ತ್ರೀಯಾದವಳು ಗಂಡನು ಮೃತನಾದಾಗ ತಾನೂ ಜೊತೆಯಲ್ಲಿ ಸತ್ತರೆ ಅವಳು, ತಾನೂ ಸ್ವರ್ಗ ಹೊಂದದೇ ಪತಿಗೂ ಸ್ವರ್ಗವನ್ನು ಹೊಂದಿಸುವುದಿಲ್ಲ.[1]

ಬ್ರಾಹ್ಮಣಸ್ತ್ರೀಯು ಬ್ರಹ್ಮನ ಅಪ್ಪಣೆಯಂತೆ ಗಂಡನೊಡನೆ ಸಾಯದೇ ಯತಿಯಂತೆ ಜೀವನ ನಡೆಸಬೇಕು. ಗಂಡನ ಜೊತೆಯಲ್ಲಿ ಸತ್ತರೆ ಆತ್ಮಹತ್ಯೆಯ ದೋಷ ಬರುತ್ತದೆ.[2]

ವಿಧವಾಸ್ತ್ರೀಯು ಅಂಗಡಿಯಲ್ಲಿ ದೊರಕುವ ಸಿಹಿಪದಾರ್ಥ ಮೊದಲಾದ ವುಗಳನ್ನು ತಿನ್ನಬಾರದು ತನಗೆ ಇಷ್ಟವಾದ ದೇವರಪೂಜೆಯನ್ನು ಮಾಡಬೇಕು. ಏಕಾದಶ್ಯಾದಿ ಉತ್ತಮ ವ್ರತಗಳನ್ನು ಮಾಡಬೇಕು. ಗಂಡನಿಗೆ ಪ್ರತಿವರ್ಷವೂ ಶ್ರಾದ್ಧಮಾಡಿಸಬೇಕು. ಅಥವಾ ತಾನು ಅಮತ್ಸರಳಾಗಿ ಜಲಪಿಂಡಕೊಡಬೇಕು.[3]

ಹರಿವಾಸರ, ಏಕಾದಶೀ ಮುಂತಾದವುಗಳಲ್ಲಿ ಉಪವಾಸ ಆಚರಿಸದೇ ತಿನ್ನುತ್ತ ತಾನು ವ್ರತಲೋಪಗಳನ್ನು ಮಾಡಿಕೊಂಡರೆ ಆ ವಿಧವಾಸ್ತ್ರೀಯು ಮತ್ತೆ ಜನ್ಮ ಜನ್ಮದಲ್ಲಿಯೂ ವೈಧವ್ಯವನ್ನು ಹೊಂದಿ ದುಃಖಪಡುತ್ತಾಳೆ.[4]

ವಿಧವಾಸ್ತ್ರೀಯು ಮೀನ, ಮಾಂಸ ಮುಂತಾದವುಗಳನ್ನು ತಿನ್ನುತ್ತ ವ್ರತಲೋಪಗಳನ್ನು ಮಾಡಿದ್ದಾದರೆ, ಅವಳು ಬಹುದಿವಸಗಳವರೆಗೆ ನರಕದಲ್ಲಿದ್ದು ಆನಂತರ ನಾಯಿಯಾಗಿ ಹುಟ್ಟುತ್ತಾಳೆ.[5]

---

1. ಯಾ ಸ್ತ್ರೀ ಬ್ರಾಹ್ಮಣಜಾತೀಯಾ ಮೃತಂ ಪತಿಮನುವ್ರಜೇತ್ ।
   ಸಾ ಸ್ವರ್ಗಮಾತ್ಮಘಾತೇನ ನಾತ್ಮಾನಂ ನ ಪತಿಂ ನಯೇತ್ ॥ ಸೃಷ್ಟಿಖಂಡ
2. ನ ಮ್ರಿಯೇತ ಸಮಂ ಭರ್ತ್ರಾ ಬ್ರಾಹ್ಮಣೀ ಬ್ರಹ್ಮಶಾಸನಾತ್ ।
   ಪ್ರವ್ರಜ್ಯಾಗತಿಮಾಪ್ನೋತಿ ಮರಣಾದಾತ್ಮಘಾತಿನೀ ॥ ಸೃಷ್ಟಿಖಂಡ
3. ಆಪಣಾಂತರಮಾಮಿಷ್ಟಂ ಭಕ್ಷಯೇನ್ನ ಕದಾಚನ ।
   ಅರ್ಹಣಂ ಚೇಷ್ಟದೇವಸ್ಯ ಹರೇರ್ವ್ರತಮನುತ್ತಮಮ್ ।
   ಸ್ವಾಮಿನೋಽಪಿ ಜಲಂ ಪಿಂಡಂ ಸಂಪ್ರದದ್ಯಾದಮತ್ಸರಾತ್ ॥ ಸೃಷ್ಟಿಖಂಡ
4. ಹರೇಶ್ಚೇದ್ವಾಸರಂ ಪ್ರಾಪ್ಯ ವಿಧವಾ ನ ವ್ರತಂ ಚರೇತ್ ।
   ಪುನರ್ವೈಧವ್ಯಮಾಯಾತಿ ಜನ್ಮಜನ್ಮನಿ ದುರ್ಭಗಮ್ ॥ ಸೃಷ್ಟಿಖಂಡ
5. ಭೋಜನಾನ್ಮತ್ಸ್ಯಮಾಂಸಸ್ಯ ವ್ರತಾನಾಂ ವಿಪ್ರಯೋಗತಃ ।
   ಚಿರಂ ನಿರಯಮಾಸಾದ್ಯ ಶುನೀ ಭವತಿ ನಿಶ್ಚಿತಮ್ ॥ ಸೃಷ್ಟಿಖಂಡ

ವಿಧವಾಸ್ತ್ರೀಯು ಮೈಥುನವನ್ನು ಹೊಂದಿದರೆ ಕುಲನಾಶಕಳಾದ ಅವಳು ನರಕವನ್ನು ಅನುಭವಿಸಿ ಹತ್ತು ಜನ್ಮಗಳವರೆಗೂ ಹದ್ದಾಗಿ ಹುಟ್ಟುವಳು.[6]

ಈ ಕಾರಣದಿಂದ ವಿಧವಾ ಸ್ತ್ರೀಯಾದವಳು ಧರ್ಮಗಳನ್ನು ಸರಿಯಾಗಿ ತಿಳಿದುಕೊಂಡು ಆಚರಿಸಿ ಭಗವಂತನ ಅನುಗ್ರಹಕ್ಕೆ ಪಾತ್ರಳಾಗಬೇಕು.

---

6. ದುಷ್ಟಾಯಾ ಮೈಥುನಂ ಗಚ್ಛೇದ್ವಿಧವಾ ಕುಲನಾಶಿನೀ ।
ನರಕಾನನುಭೂಯಾಥ ಗೃಧ್ರಿಣೀ ದಶಜನ್ಮನಿ ॥ ಸೃಷ್ಟಿಖಂಡ

****

## ಶ್ರೀಬ್ರಹ್ಮವೈವರ್ತಪುರಾಣದಲ್ಲಿ ವಿಧವಾಸ್ತ್ರೀಯರ ಧರ್ಮಗಳು.

ವಿಧವಾ ಸ್ತ್ರೀಯರು, ಯತಿಗಳು, ಸಂನ್ಯಾಸಿಗಳು ಮತ್ತು ಬ್ರಹ್ಮಚಾರಿಗಳು ತಾಂಬೂಲವನ್ನು ಸೇವಿಸುವುದು, ಗೋಮಾಂಸ ಭಕ್ಷಣ ಮತ್ತು ಮದ್ಯಪಾನಕ್ಕೆ ಸಮವೆಂದು ವೇದದಲ್ಲಿ ಕೇಳಿದ್ದೇವೆ.[1]

ವಿಧವಾ ಸ್ತ್ರೀಯರು ಕೂದಲನ್ನು ಜಡೆ ಹಾಕಿಕೊಂಡು ಸಿಂಗರಿಸಿಕೊಳ್ಳಬಾರದು. ಗಂಟು ಹಾಕಿಕೊಳ್ಳಬಾರದು, ಅವನ್ನು ತೀರ್ಥಸ್ಥಳಗಳಲ್ಲಿ ಅಲ್ಲದೇ ಬೇರೆ ಕಡೆಯಲ್ಲಿ ಕತ್ತರಿಸಬಾರದು ತೈಲಾಭ್ಯಂಜನವನ್ನು ಮಾಡಿಕೊಳ್ಳಬಾರದು ಹಾಗೆಯೇ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳಬಾರದು.[2]

ವಿಧವಾ ಸ್ತ್ರೀಯರು ಪರಪುರುಷರ ಮುಖವನ್ನು ನೋಡಬಾರದು. ಜಾತ್ರೆ, ನೃತ್ಯಗಳನ್ನಾಗಲೀ, ಇತರ ಯಾವ ನೃತ್ಯಗಳನ್ನಾಗಲೀ, ಮಹೋತ್ಸವವನ್ನಾಗಲೀ ನೋಡಬಾರದು. ಗ್ರಾಮ್ಯ ಹಾಡುಗಳನ್ನು ಕೇಳಬಾರದು ಮತ್ತು ಸುಂದರ ಪುರುಷನ ಕಡೆಗೆ ಎಂದೂ ನೋಡಬಾರದು.[3]

ವಿಧವಾ ಸ್ತ್ರೀಯರು ತಮ್ಮ ಜೀವನವನ್ನು ಸರಳವಾಗಿ ತಪೋಮಯವನ್ನಾಗಿ ಮಾಡಿಕೊಳ್ಳಬೇಕು. ಶಾಸ್ತ್ರದಲ್ಲಿ ತಿಳಿಸಿದಂತೆ ತಮ್ಮ ಧರ್ಮಗಳನ್ನು ಪಾಲಿಸುತ್ತ ಸುಖ ಭೋಗಗಳನ್ನು ತ್ಯಜಿಸಿ ಭಗವಂತನಲ್ಲಿ ಶರಣಾಗಬೇಕು. ಇದರಿಂದ ಅವರಿಗೆ ಇಹಪರ ಕೀರ್ತಿಗಳು ಲಭಿಸುತ್ತವೆ.

****

---

1. ತಾಂಬೂಲಂ ವಿಧವಾ ಸ್ತ್ರೀಣಾಂ ಯತೀನಾಂ ಬ್ರಹ್ಮಚಾರಿಣಾಮ್ ।
ಸಂನ್ಯಾಸಿನಾಂ ಚ ಗೋಮಾಂಸಸುರಾತುಲ್ಯಂ ಶ್ರುತೌ ಶ್ರುತಮ್ ॥ ಶ್ರೀ ಕೃಷ್ಣ ಖಂಡ 83–100
2. ಕೇಶವೇಣೀ ಜಟಾರೂಪಾಂ ನ ಕ್ಷೌರಂ ತೀರ್ಥಕಂ ವಿನಾ ।
ತೈಲಾಭ್ಯಂಗಂ ನ ಕುರ್ವೀತ ನ ಹಿ ಪಶ್ಯತಿ ದರ್ಪಣಮ್ ॥ ಶ್ರೀ ಕೃಷ್ಣ ಖಂಡ 83–104
3. ಮುಖಂ ಚ ಪರಪುಂಸಾಂ ಚ ಯಾತ್ರಾ ನೃತ್ಯಂ ಮಹೋತ್ಸವಮ್ ।
ನರ್ತನಂ ಗಾಯನಂ ಚೈವ ಸುವೇಷಂ ಪುರುಷಂ ಶುಭಮ್ ॥ ಶ್ರೀ ಕೃಷ್ಣ ಖಂಡ 83–105

# ಶ್ರೀಸ್ಕಂದಪುರಾಣದಲ್ಲಿ ವಿಧವಾಸ್ತ್ರೀಯರ ಧರ್ಮಗಳು

ವಿಧವಾ ಸ್ತ್ರೀಯು ಪಲ್ಲಂಗದ ಮೇಲೆ ಮಲಗಬಾರದು. ಒಂದು ವೇಳೆ ಹಾಗೆ ಮಲಗಿದ್ದಾದರೆ ಪತಿಯನ್ನು ನರಕದಲ್ಲಿ ಬೀಳಿಸುತ್ತಾಳೆ. ಕಾರಣ ಪತಿಗೆ ಸೌಖ್ಯವಾಗಲೆಂದು ಹಾರೈಸುವ ಸ್ತ್ರೀಯು ನೆಲದ ಮೇಲೆ ಮಲಗಬೇಕು.[1]

ವಿಧವಾ ಸ್ತ್ರೀಯು ತನ್ನ ದೇಹವನ್ನು ಸಿಂಗರಿಸಿಕೊಳ್ಳಬಾರದು. ವಿಲಾಸೀ ವಸ್ತುಗಳನ್ನು ಸುಗಂಧ ಪರಿಮಳ ದ್ರವ್ಯಗಳನ್ನು ಉಪಯೋಗಿಸಬಾರದು.[2]

ಪ್ರತಿದಿನವೂ ಪತಿಯ ಹೆಸರಿನಲ್ಲಿ ದರ್ಭೆ ಹಾಕಿದ ನೀರಿನಿಂದ ತರ್ಪಣಕೊಡಬೇಕು. ಪತಿ, ಪತಿಯ ತಂದೆ, ಪತಿಯ ತಂದೆಯ ತಂದೆ ಇವರ ಹೆಸರನ್ನು ಮೂರು ಮೂರು ಸಲ ಉಚ್ಚರಿಸಿ ನೀರು ಬಿಡಬೇಕು. (ಇದು ಗಂಡು ಮಕ್ಕಳಿಲ್ಲಧವರು ಮಾಡಬೇಕಾದ ಕಾರ್ಯವೆಂದು ತಿಳಿಯಬೇಕು).[3]

ಪತಿಯ ಅಂತರ್ಗತನಾದ ಶ್ರೀವಿಷ್ಣುವನ್ನು ದಿನವೂ ಪೂಜೆ ಮಾಡಬೇಕು. ಪತಿರೂಪಿಯಾದ ಆ ವಿಷ್ಣುವನ್ನು ಧ್ಯಾನಿಸಬೇಕು.[4]

---

1. ಪರ್ಯಂಕ ಶಾಯಿನೀ ನಾರೀ ವಿಧವಾ ಪಾತಯೇತ್ ಪತಿಮ್ ।
ತಸ್ಮಾದ್ ಭೂಶಯನಂ ಕಾರ್ಯಂ ಪತಿಸೌಖ್ಯ ಸಮೀಹಯಾ ॥
ಧರ್ಮಾರಣ್ಯ ಮಹಾತ್ಮೆ 7–67

2. ನೈವಾಂಗೋದ್ವರ್ತನಂ ಕಾರ್ಯಂ ಸ್ತ್ರಿಯಾ ವಿಧವಯಾ ಕ್ವಚಿತ್ ।
ಗಂಧದ್ರವ್ಯಸ್ಯ ಸಂಭೋಗೋ ನೈವ ಕಾರ್ಯಸ್ತಯಾ ಕ್ವಚಿತ್ ॥
ಧರ್ಮಾರಣ್ಯ ಮಹಾತ್ಮೆ 7–68

3. ತರ್ಪಣಂ ಪ್ರತ್ಯಹಂ ಪತ್ಯುಃ ಕಾರ್ಯಂ ಕುಶತಿಲೋದಕೈಃ ।
ತತ್ಪಿತುಸ್ತತ್ಪಿತುಶ್ಚಾಪಿ ನಾಮಗೋತ್ರಾದಿ ಪೂರ್ವಕಮ್ ॥
ಧರ್ಮಾರಣ್ಯ ಮಹಾತ್ಮೆ 7–69

4. ವಿಷ್ಣೋಃ ಸಂಪೂಜನಂ ಕಾರ್ಯಂ ಪತಿ ಬುದ್ಧ್ಯಾ ನ ಚಾನ್ಯಥಾ ।
ಪತಿಮೇವ ಸದಾ ಧ್ಯಾಯೇದ್ವಿಷ್ಣುರೂಪಧರಂ ಹರಿಮ್ ॥
ಧರ್ಮಾರಣ್ಯ ಮಹಾತ್ಮೆ 7–70

ಪತಿಗೆ ಅತ್ಯಂತ ಇಷ್ಟವಾದ ವಸ್ತುಗಳನ್ನು, ಸದಾಚಾರ, ಗುಣವಂತನಾದ ಬ್ರಾಹ್ಮಣನಿಗೆ ಪತಿಯ ತೃಪ್ತಿಗಾಗಿ ದಾನ ಕೊಡಬೇಕು.[5]

ವಿಧವಾ ಸ್ತ್ರೀಯು ವೈಶಾಖ, ಕಾರ್ತಿಕ ಮೊದಲಾದ ಮಾಸಗಳಲ್ಲಿ ವಿಶೇಷ ನಿಯಮಗಳನ್ನು ಪಾಲಿಸುತ್ತ, ಸ್ನಾನ ದಾನ, ತೀರ್ಥಯಾತ್ರೆಗಳನ್ನು, ಪುರಾಣ ಶ್ರವಣಾದಿಗಳನ್ನು ಮತ್ತೆ ಮತ್ತೆ ಮಾಡುತ್ತಲಿರಬೇಕು.[6]

---

5. ಯದ್ಯದಿಷ್ಟತಮಂ ಲೋಕೇ ಯದ್ಯತ್ಪತ್ಯುಃ ಸಮೀಹಿತಮ್ ।
ತತ್ತದ್‌ಗುಣವತೇ ದೇಯಂ ಪತಿಪ್ರೀಣನಕಾಮ್ಯಯಾ ॥
ಧರ್ಮಾರಣ್ಯ ಮಹಾತ್ಮೆ 7–71

6. ವೈಶಾಖೇ ಕಾರ್ತಿಕೇಮಾಸೇ ವಿಶೇಷ ನಿಯಮಾಂಶ್ಚರೇತ್ ।
ಸ್ನಾನಂ ದಾನಂ ತೀರ್ಥಯಾತ್ರಾಂ ಪುರಾಣಶ್ರವಣಂ ಮುಹುಃ ॥
ಧರ್ಮಾರಣ್ಯ ಮಹಾತ್ಮೆ 7–72

****

## ಶ್ರೀಮನುಸ್ಮೃತಿಯಲ್ಲಿ ವಿಧವಾಸ್ತ್ರೀಯರ ಧರ್ಮಗಳು.

ಪತಿಯ ಮರಣಾನಂತರದಲ್ಲಿ ಪತ್ನಿಯು ಧರ್ಮವನ್ನು ಪಾಲಿಸುತ್ತ ಶರೀರಸುಖವನ್ನು ಕಡೆಗಣಿಸಿ ಚಾರಿತ್ರ್ಯರಕ್ಷಣೆಯ ಕಡೆಗೆ ಗಮನ ಕೊಡಬೇಕೆಂದು ಮನುವು ವಿಧಿಸಿದ್ದಾನೆ. ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸಲಾಗಿದೆ.

ಪತಿಯ ಮರಣಾನಂತರ ಪತ್ನಿಯಾದವಳು ಪವಿತ್ರವಾದ ಫಲಗಳನ್ನು, ಸಾತ್ವಿಕ ಆಹಾರವನ್ನು ಸ್ವೀಕರಿಸುತ್ತ ದೇಹವನ್ನು ದಂಡಿಸಬೇಕು. ಹಾಗೆಯೇ ವ್ಯಭಿಚಾರ ಬುದ್ಧಿಯಿಂದ ಪರಪುರುಷನ ಹೆಸರನ್ನು ಕೂಡ ಉಚ್ಚರಿಸಬಾರದು.[1]

ಪತಿಯ ಮರಣಾನಂತರ ಪತ್ನಿಯು ಕ್ಷಮಾಯುಕ್ತಳಾಗಿ ನಿಯಮವುಳ್ಳವಳಾಗಿ, ಏಕಪತಿವುಳ್ಳವರ ಧರ್ಮವನ್ನು ಅನುಸರಿಸುತ್ತ ಮಧು, ಮಾಂಸ, ಮೈಥುನಗಳನ್ನು ವರ್ಜಿಸಿ ಬ್ರಹ್ಮಚಾರಿಣಿಯಾಗಿ ಮರಣಪರ್ಯಂತವೂ ಇರಬೇಕು. ಅಪುತ್ರವತಿಯಾಗಿದ್ದರೂ ಪುತ್ರಾರ್ಥವಾಗಿ ಬೇರೆ ಪುರುಷನನ್ನು ಸೇವಿಸಕೂಡದು.[2]

---

1. ಕಾಮಂ ತು ಕ್ಷಪಯೇದ್ದೇಹಂ ಪುಷ್ಪಮೂಲ ಫಲೈಃ ಶುಭೈಃ ।
ನ ತು ನಾಮಾಪಿ ಗೃಹ್ಣೀಯಾತ್ ಪತ್ಯೌ ಪ್ರೇತೇ ಪರಸ್ಯತು ॥ 5–157

2. ಆಸೀತಾಮರಣಾತ್ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ ।
ಯೋ ಧರ್ಮ ಏಕಪತ್ನೀನಾಂ ಕಾಂಕ್ಷತೀ ತಮನುತ್ತಮಮ್ ॥ 5–158

ಪತಿಯು ನಿಧನಹೊಂದಿದನಂತರ ಸಾಧ್ವಿ ಎನಿಸಿದ ಸ್ತ್ರೀಯು ಬ್ರಹ್ಮಚರ್ಯವ್ರತ ಆಚರಿಸಿದ್ದಾದರೆ, ಪುತ್ರರಹಿತಳಾಗಿದ್ದರೂ ಕೂಡ ಸ್ವರ್ಗವನ್ನು ಕುರಿತು ಹೋಗುತ್ತಾಳೆ. ಸನಕ, ವಾಲಖಿಲ್ಯಾದಿ ಋಷಿಗಳು ಪುತ್ರರಹಿತರಾಗಿದ್ದರೂ ಸ್ವರ್ಗವನ್ನು ಹೇಗೆ ಹೊಂದಿದರೋ ಹಾಗೆ ಎಂದು ತಿಳಿಯಬೇಕು.[3]

ಪುತ್ರ ಹುಟ್ಟುವುದರಿಂದ ನಾನು ಸ್ವರ್ಗವನ್ನು ಹೊಂದುವೆನೆಂಬ ಲೋಭದಿಂದ ಯಾವ ವಿಧವಾ ಸ್ತ್ರೀಯು ಪತಿಯನ್ನು ಅತಿಕ್ರಮಿಸಿ ವರ್ತಿಸುವಳೋ ಅಂದರೆ ವ್ಯಭಿಚಾರ ಮಾಡುವಳೋ, ಅಂಥವಳು ಈ ಲೋಕದಲ್ಲಿ ನಿಂದೆಗೆ ಈಡಾಗುತ್ತಾಳೆ. ಪತಿಲೋಕವನ್ನು ಹೊಂದದೇ ಕಷ್ಟಪಡುತ್ತಾಳೆ.[4]

ಪತಿಯ ಮರಣಾನಂತರ ಪತ್ನಿಯು ವ್ಯಭಿಚಾರ ಮಾಡಿದ್ದಾದರೆ, ಅವಳು ಈ ಲೋಕದಲ್ಲಿ ಜನರ ನಿಂದೆಗೆ ಗುರಿಯಾಗುತ್ತಾಳೆ. ನಾನಾ ವಿಧ ರೋಗಗಳಿಗೆ ತುತ್ತಾಗಿ ಸತ್ತ ಬಳಿಕ ಅವಳು ನರಿಯ ಜನ್ಮ ಪಡೆಯುತ್ತಾಳೆ.[5]

ಮನಸ್ಸು, ಮಾತು, ದೇಹಗಳಿಂದ ಸಂಯಮವುಳ್ಳವಳಾಗಿ ಪತಿಯನ್ನು ಮಾತ್ರ ಸ್ಮರಿಸುತ್ತ ಜೀವಿಸುವ ಸ್ತ್ರೀಯು ಪತಿಲೋಕವನ್ನು ಹೊಂದುವುದಲ್ಲದೇ ಈ ಲೋಕದಲ್ಲಿ "ಸಾಧ್ವೀ" ಎಂದು ಕರೆಸಿಕೊಳ್ಳುತ್ತಾಳೆ.[6]

ಮೇಲೆ ಹೇಳಿದ ಸ್ತ್ರೀ ಧರ್ಮಗಳನ್ನು ಮನದಲ್ಲಿಟ್ಟು ಮನಸ್ಸು ಮಾತು ದೇಹಗಳಿಂದ ಸಂಯಮಿಯಾದ ಸ್ತ್ರೀಯು ಈ ಲೋಕದಲ್ಲಿ ಒಳ್ಳೆಯ ಕೀರ್ತಿಯನ್ನು, ಪರತ್ರ ಪತಿಲೋಕ ಹೊಂದುತ್ತಾಳೆ.[7]

****

---

3. ಮೃತೇ ಭರ್ತರಿ ಸಾಧ್ವೀಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।
ಸ್ವರ್ಗಂ ಗಚ್ಛತಿ ಅಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ॥ 5–160

4. ಅಪತ್ಯಲೋಭಾದ್ಯಾ ತು ಸ್ತ್ರೀ ಭರ್ತಾರಮತಿವರ್ತತೇ ।
ಸೇಹ ನಿಂದಾಮವಾಪ್ನೋತಿ ಪತಿಲೋಕಾಚ್ಚ ಹೀಯತೇ ॥ 5–161

5. ವ್ಯಭಿಚಾರಾತ್ತು ಭರ್ತುಃ ಸ್ತ್ರೀಲೋಕೇ ಪ್ರಾಪ್ನೋತಿ ನಿಂದ್ಯತಾಮ್ ।
ಶೃಗಾಲಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥ 5–164

6. ಪತಿಂ ಯಾ ನಾಭಿಚರತಿ ಮನೋವಾಗ್ದೇಹ ಸಂಯುತಾ ।
ಸಾ ಭರ್ತೃಲೋಕಮಾಪ್ನೋತಿ ಸದ್ಭಿಃ ಸಾಧ್ವೀತಿ ಚೋಚ್ಯತೇ ॥ 5–165

7. ಅನೇನ ನಾರೀ ವೃತ್ತೇನ ಮನೋವಾಗ್ದೇಹ ಸಂಯತಾ ।
ಇಹಾಗ್ರ್ಯಾಂ ಕೀರ್ತಿಮಾಪ್ನೋತಿ ಪತಿಲೋಕಂ ಪರತ್ರ ಚ ॥ 5–166

# ಶ್ರೀವೃದ್ಧಹಾರೀತಸ್ಮೃತಿಯಲ್ಲಿ ವಿಧವಾಸ್ತ್ರೀಯರ ಧರ್ಮಗಳು

ಪತಿಯ ಮರಣಾನಂತರ ಸ್ತ್ರೀಯಾದವಳು ಜೀವಮಾನದ ವರೆಗೂ ಬ್ರಹ್ಮಚರ್ಯ ವ್ರತದಿಂದ ಇರಬೇಕು. ಕೂದಲುಗಳನ್ನು ಅಲಂಕರಿಸುವುದು, ತಾಂಬೂಲ ಗಂಧ ಪುಷ್ಪಾದಿಗಳ ಸೇವನೆ, ಆಭರಣ, ಬಣ್ಣದ ಬಟ್ಟೆ ತೊಡುವುದು, ಕಂಚಿನ ಪಾತ್ರೆಯಲ್ಲಿ ಭೋಜನ, ಕಣ್ಣಿಗೆ ಕಾಡಿಗೆ ಹಚ್ಚುವುದು ಎರಡು ಸಾರೆ ಊಟ ಇವೆಲ್ಲವುಗಳನ್ನು ಸರ್ವದಾ ವರ್ಜಿಸಬೇಕು.[1]

ನಿತ್ಯ ಸ್ನಾನ ಮಾಡಿ ವಿಧವಾ ಸ್ತ್ರೀಯು ಬಿಳಿಯ ಉಡುಪು (ಸೀರೆ) ಉಟ್ಟವಳಾಗಿ, ಇಂದ್ರಿಯ ನಿಗ್ರಹವುಳ್ಳವಳಾಗಿ, ಸಿಟ್ಟನ್ನು ಗೆದ್ದವಳಾಗಿ, ಕಪಟ, ಮಾಯೆಗಳಿಲ್ಲದವಳಾಗಿ, ತೂಕಡಿಕೆ, ಆಲಸ್ಯರಹಿತಳಾಗಿ, ಶುದ್ಧವಾದ ಶುಭಾಚಾರವುಳ್ಳವಳಾಗಿ, ಯಾವಾಗಲೂ ಶ್ರೀಹರಿಯನ್ನು ಪೂಜಿಸುತ್ತಿರಬೇಕು.[2]

ಪತಿಗೆ ಸುಖವನ್ನೇ ಬಯಸುವ ವಿಧವಾಸ್ತ್ರೀಯು ರಾತ್ರಿಯಲ್ಲಿ ಭೂಮಿಯ (ನೆಲದ) ಮೇಲೆ ಮಲಗಬೇಕು. ಯಾವಾಗಲೂ ಭಗವಂತನ ಧ್ಯಾನ ನಡೆಸುತ್ತ ಸಜ್ಜನರ ಸಹವಾಸದಲ್ಲಿಯೇ ಇರುವವಳಾಗಬೇಕು.[3]

ವಿಧವಾ ಸ್ತ್ರೀಯು ಒಂದು ಹೊತ್ತು ಮಾತ್ರ ಊಟ ಮಾಡುತ್ತ ಒಳ್ಳೆಯ ನಿಯತಾಹಾರವುಳ್ಳವಳಾಗಿ, ವ್ರತ ನಿಯಮಗಳನ್ನು ಮಾಡುತ್ತಿದ್ದರೆ, ಅವಳು ಪತಿಯ ಜೊತೆಗೆ ನಾಶರಹಿತವಾದ, ವೈಕುಂಠಸ್ಥಾನವನ್ನು ಹೊಂದುತ್ತಾಳೆ.[4]

****

---

1. ಬ್ರಹ್ಮಚರ್ಯವ್ರತಂ ಕುರ್ಯಾದ್ಯಾವಜ್ಜೀವಮತಂದ್ರಿತಾ ।
ಕೇಶರಂಜನ ತಾಂಬೂಲ ಗಂಧ ಪುಷ್ಪಾದಿಸೇವನಮ್ ॥
ಭೂಷಣಂ ರಂಗವಸ್ತ್ರಂ ಚ ಕಾಂಸ್ಯಪಾತ್ರೇಷು ಭೋಜನಮ್ ।
ದ್ವಿವಾರಂ ಭೋಜನಂ ಚಾಕ್ಷ್ಣೋರಂಜನಂ ವರ್ಜಯೇತ್ ಸದಾ॥ 8–205

2. ಸ್ನಾತ್ವಾ ಶುಕ್ಲಾಂಬರಧರಾ ಜಿತಕ್ರೋಧಾ ಜಿತೇಂದ್ರಿಯಾ ।
ನ ಕಲ್ಕ ಕುಹಕಾ ಸಾಧ್ವೀ ತಂದ್ರಾಲಸ್ಯ ವಿವರ್ಜಿತಾ ।
ಸುನಿರ್ಮಲಾ ಶುಭಾಚಾರಾ ನಿತ್ಯಂ ಸಂಪೂಜಯೇದ್ಧರಿಮ್ ॥ 8–206

3. ಕ್ಷಿತಿಶಾಯೀ ಭವೇದ್ರಾತ್ರೌ ಶುಚೌದೇಶೇ ಕುಶೋತ್ತರೇ ॥
ಧ್ಯಾನಯೋಗ ಪರಾ ನಿತ್ಯಂ ಸತಾಂ ಸಂಗೇ ವ್ಯವಸ್ಥಿತಾ ॥ 8–208

4. ಏವಂ ಸುನಿಯತಾಹಾರಾ ಸಮ್ಯಕ್ ವ್ರತಪರಾಯಣಾ ।
ಭರ್ತ್ರಾ ಸಹ ಸಮಾಪ್ನೋತಿ ವೈಕುಂಠಪದಮವ್ಯಯಮ್ ॥ 8–211

# ಸಂಕ್ಷಿಪ್ತ ವಿಧವಾಸ್ತ್ರೀಯರ ಧರ್ಮಗಳು

ದುರ್ದೈವವಶಾತ್ ಸ್ತ್ರೀಗೆ ಪತಿವಿಯೋಗವಾದರೆ ಪತಿಯ ಅಂತರ್ಗತನಾದ ವಿಷ್ಣುವನ್ನು ಸದಾಕಾಲ ಧ್ಯಾನಿಸುತ್ತಿರಬೇಕು. ಪತಿರಹಿತಳಾದ ಸ್ತ್ರೀಯು ಎಂದೂ ಪಲ್ಲಂಗದ ಮೇಲೆ ಸುಖದ ಸುಪ್ಪತ್ತಿಗೆಯಲ್ಲಿ ಮಲಗಬಾರದು. ನೆಲದ ಮೇಲೆ ಶಯನ ಮಾಡಬೇಕು. ತನ್ನ ಶರೀರವನ್ನು ಸಿಂಗರಿಸಿಕೊಳ್ಳಬಾರದು. ವಿಲಾಸೀ ವಸ್ತುಗಳನ್ನು ಸೇವನೆ ಮಾಡಬಾರದು. ಸುಗಂಧದ್ರವ್ಯಗಳನ್ನು ಉಪಯೋಗಿಸಬಾರದು ತರ್ಪಣ ಕೊಡುವ ಮಕ್ಕಳಿಲ್ಲವಾದರೆ ತಾನೇ ಪತಿ, ಪತಿಯ ತಂದೆ, ಪತಿಯ ತಂದೆಯ ತಂದೆ ಇವರ ಹೆಸರು ಉಚ್ಚರಿಸಿ ಮೂರುಸಲ ದರ್ಭೆಹಾಕಿದ ನೀರಿನಿಂದ ತರ್ಪಣ ಕೊಡಬೇಕು. ಪತಿಗೆ ಇಷ್ಟವಾದ ವಸ್ತುಗಳನ್ನು ಸದಾಚಾರಿಗಳಾದ ಬ್ರಾಹ್ಮಣರಿಗೆ ದಾನ ಕೊಡಬೇಕು. ಸ್ನಾನ, ದಾನ, ತೀರ್ಥಯಾತ್ರೆ, ಪುರಾಣ ಶ್ರವಣಗಳನ್ನು ತಪ್ಪದೇ ಮಾಡುತ್ತಿರಬೇಕು.

ಪತಿರಹಿತಳಾದ ಸ್ತ್ರೀಗೆ "ವಿಧವಾ" ಎಂದು ಕರೆಯುವದುಂಟು. ಅದರ ಅರ್ಥ ಹೀಗಿದೆ.

ವಿ= ವಿಷ್ಣು (ವಿಃ ಪಕ್ಷಿ ಪರಮಾತ್ಮನೋಃ ಎಂಬಂತೆ)
ಧವ = ಪತಿ

ವಿಷ್ಣುವನ್ನೇ ಪತಿಯಾಗಿ ಉಳ್ಳವಳು ಎಂದರ್ಥವು. ಹಾಗಾಗಿ ಅವಳು ತನ್ನ ಪತ್ಯಂತರ್ಗತ ವಿಷ್ಣುವನ್ನೇ ಸೇವೆ ಮಾಡುತ್ತ, ವಿಷ್ಣುವಿನ ಕಥೆಗಳನ್ನೇ ಕೇಳುತ್ತ ಕಾಲ ಕಳೆಯಬೇಕು.

ವಿಧವಾ ಸ್ತ್ರೀಯು "ಸಂನ್ಯಾಸ" ಧರ್ಮಗಳನ್ನು ಪಾಲಿಸುತ್ತ ಇರುವದು ಪತಿಗೂ ತನಗೂ ಇಬ್ಬರಿಗೂ ಶ್ರೇಯಸ್ಕರವಾಗಿದೆ.ಆತ್ಮಶುದ್ಧಿಗಾಗಿ, ಸಂನ್ಯಾಸಧರ್ಮ ಪಾಲಿಸಲು, ಶಾಸ್ತ್ರಕಾರರು ಅವಳಿಗೆ ಮುಂಡನ ಮಾಡಿಸಿಕೊಳ್ಳಬೇಕೆಂದು ವಿಧಿಸಿದ್ದಾರೆ. ಅವಳ ಅನುಸಂಧಾನ ಹೀಗಿರಬೇಕು.

ಮೇರುಮಂದರ ಪರ್ವತದಷ್ಟು ಪಾಪಗಳು ಕೇಶಗಳನ್ನು ಆಶ್ರಯಿಸಿ ಇರುವ ಪ್ರಯುಕ್ತ ನಾನು ಕೇಶಗಳನ್ನು ವಿಸರ್ಜಿಸುತ್ತೇನೆ. ಆತ್ಮಶುದ್ಧಿಗೆ, ಪತಿಯ ಮುಕ್ತಿಗೆ ಕಾರಣವಾಗಲೆಂದು ಕೇಶಗಳನ್ನು ಬ್ರಾಹ್ಮಣರ ಸನ್ನಿಧಿಯಲ್ಲಿ ವಿಸರ್ಜಿಸುತ್ತೇನೆ.[1]

ಈ ರೀತಿಯಾಗಿ ಕೇಶಗಳನ್ನು ವಿಸರ್ಜಿಸಿದ ಪತಿವ್ರತೆಯಾದ ಸ್ತ್ರೀಯು ಆ ಭಗವಂತನಿಗೆ ನೈವೇದ್ಯಕ್ಕೆ ಅಡಿಗೆ, ಮುಂತಾದ ಎಲ್ಲ ಕಾರ್ಯಗಳನ್ನು ಮಾಡಲು ಅರ್ಹಳೆನಿಸುತ್ತಾಳೆ. ಅಂದರೆ ಅವಳಿಂದ ಮಾಡಲ್ಪಟ್ಟ ಅಡಿಗೆ ನೈವೇದ್ಯಕ್ಕೆ ಗ್ರಾಹ್ಯವಾಗುತ್ತದೆ.

ಇಂಥ ಧರ್ಮಗಳನ್ನು ಪಾಲಿಸುತ್ತ ಸಂನ್ಯಾಸಿನಿಯಾಗಿ ಭಗವಂತನ ಸೇವೆ ಮಾಡಿ ತನ್ನ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕು.

****

---

1. ಮೇರು ಮಂದಾರ ತುಲ್ಯಾನಿ ಪಾಪಾನಿ ವಿವಿಧಾನಿ ಚ ।
ಕೇಶಾನಾಶ್ರಿತ್ಯ ತಿಷ್ಠಂತಿ ತಸ್ಮಾತ್ ಕೇಶಾನ್ ವಪಾಮ್ಯಹಮ್ ॥
ಆತ್ಮನಶ್ಶುದ್ಧಿ ಕಾಮೋ ವಾ ಮದ್‌ಭರ್ತುಃ ಮುಕ್ತಿಹೇತವೇ ।
ವಪನಂ ಕಾರಯಿಷ್ಯಾಮಿ ತೀರೇ ಬ್ರಾಹ್ಮಣ ಸನ್ನಿಧೌ ॥ ಪುರಾಣ ವಚನ.

# ಭಾಗ-3

## ಶ್ರೀಹರಿದಾಸರು ಬೋಧಿಸಿದ ಸ್ತ್ರೀಧರ್ಮಗಳು

ಸಮಾಜ ಸುಧಾರಣೆಯಲ್ಲಿ ಹರಿದಾಸರ ಪಾತ್ರ ಹಿರಿದು. ಅವರು ಸಮಾಜದಲ್ಲಿಯ ಜನರ ನಡತೆಯ ಬಗ್ಗೆ ಬೋಧಿಸಿ ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿದ ಮೇಧಾವಿಗಳು. ಅನುಭಾವಿಗಳು. ಇದರ ಜೊತೆಗೆ ಸ್ತ್ರೀಯರ ಬಗ್ಗೆ ಅವರ ಕಳಕಳಿಯೂ ಮೆಚ್ಚುವಂಥಹದು. ಸ್ತ್ರೀಯರು ತಮ್ಮ ಕರ್ತವ್ಯಪ್ರಜ್ಞೆಯಿಂದ ನಡೆದುಕೊಂಡಾಗ ಪ್ರತಿಯೊಬ್ಬರ ಬಾಳು ಹಸನವಾಗುವದರಲ್ಲಿ ಸಂದೇಹವಿಲ್ಲ. ಹಾಗಾಗಿ ಸ್ತ್ರೀಯರ ಕರ್ತವ್ಯಗಳೇನು? ಅವರು ಅತ್ತೆಯ ಮನೆಯಲ್ಲಿ ನಡೆದುಕೊಳ್ಳಬೇಕಾದ ಬಗೆ ಹೇಗೆ? ಇತ್ಯಾದಿ ವಿಷಯಗಳನ್ನು ತಮ್ಮ ಪದ ಪದ್ಯಗಳಲ್ಲಿ ಅಂದವಾಗಿ ತಿಳಿಸಿಕೊಟ್ಟಿರುವುದು ಗಮನಾರ್ಹವಾಗಿದೆ.

ಶ್ರೀ ಪುರಂದರದಾಸರು "ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ" ಪದ್ಯದಲ್ಲಿ ಶ್ರೀಕೃಷ್ಣ ತಂಗಿಯನ್ನು ಕುರಿತು ಮಾಡಿದ ಬೋಧನೆಯ ವೈಖರಿಯನ್ನು ಚೆನ್ನಾಗಿ ತಿಳಿಸಿಕೊಟ್ಟಿದ್ದಾರೆ.

ಯಾರೇನು ಅಂದರೂ ಮೋರೆಯನು ತಿರುವದಿರು-

ಮನೆಯವರಾಗಲಿ, ಬೇರೆ ಯಾರಾದರಾಗಲಿ ಕೆಟ್ಟ ಮಾತು ಆಡಿದರೂ ನೀನು ಮಾತ್ರ ಮುಖವನ್ನು ತಿರುಗಿಸಿ ಮಾತಾಡಬೇಡ, ಸಿಟ್ಟಿಗೆ ಬರಬೇಡ, ಸಿಟ್ಟು ಕೆಡುಕನ್ನು ಉಂಟು ಮಾಡುತ್ತದೆ.

ಪರರ ಒಡೆವೆಯ ಕಂಡು ದುರುಳ ಮಾತಾಡದಿರು-<br>
ನೆರೆಹೊರೆಯರಿಗೆ ನೀನು ತಲೆಬಾಗಿ ನಡೆಯೆ ॥

ಇನ್ನೊಬ್ಬರ ಒಡವೆಗಳನ್ನು ಕಂಡು ದುಷ್ಟ ಮಾತುಗಳನ್ನಾಡಬೇಡ, ಭಗವಂತ ಅವರಿಗೆ ಕರುಣಿಸಿಕೊಟ್ಟಿದ್ದಾನೆ. ಅವರು ಅನುಭವಿಸುತ್ತಿದ್ದಾರೆ. ಕಾರಣ ಅವರ ಬಗ್ಗೆ ಬಿರುಸುಮಾತು ಬೇಡ. ನೆರೆಹೊರೆಯ ಜನರಿಗೆ ನೀನು ತಲೆಬಾಗಿ ನಡೆದುಕೋ. ಅವರ ಜೊತೆ ಯೋಗ್ಯವಾದ ಮಾತುಗಳನ್ನಾಡಿ ಸಂತಸದಿಂದ ಇರು.

ಅಂಗನೇರಿಗೆ ನಿನ್ನಂತರಂಗವ ಹೇಳದಿರು ।<br>
ಬಂಗಾರ ವಸ್ತುಗಳ ಮುಚ್ಚಿಕೊಳ್ಳಮ್ಮ ॥

ಇತರ ಸ್ತ್ರೀಯರಿಗೆ ನಿನ್ನ ಅಂತರಂಗವನ್ನು, ನಿನ್ನ ಮನೆತನದ ವಿಷಯಗಳನ್ನು ಹೇಳಬೇಡ ನಿನ್ನ ಜೀವನದ ಅಮೌಲ್ಯ ವಿಷಯಗಳು ಗೌಪ್ಯವಾಗಿರಲಿ, ಮತ್ತು ಬಂಗಾರದ ವಸ್ತುಗಳನ್ನು ಬೆಲೆಬಾಳುವ ಒಡವೆ ಸಾಮಾನುಗಳನ್ನು ಮುಚ್ಚಿಟ್ಟುಕೋ, ಎಲ್ಲರಿಗೂ ತೋರಿಸಬೇಡ.

ಹೆಣ್ಣುಮಕ್ಕಳಲ್ಲಿ ಗೌಪ್ಯ ವಿಷಯಗಳು ಉಳಿಯುವದು ಬಹಳ ಕಷ್ಟ ಅಷ್ಟೇ ಅಲ್ಲ ತಾವೇನಾದರೂ ಬಂಗಾರ ಮೊದಲಾದ ಒಡವೆ, ವಸ್ತು ಖರೀದಿಸಿದ್ದಾದರೆ ನಾಲ್ಕು ಜನರಿಗೆ ತೋರಿಸಿದಾಗಲೇ ಅವರಿಗೆ ಸಮಾಧಾನ. ಆದರೆ ಜನರು ಒಂದೇ ತರ ಇರುವದಿಲ್ಲ. ಒಳ್ಳೇಯವರೇ ಇರುತ್ತಾರೆಂದು ಹೇಳುವುದು ಸಾಧ್ಯವಿಲ್ಲ ಕಾರಣ. "ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು" ಉಕ್ತಿಯಂತೆ ಇಲ್ಲಿ ಅಂಥ ವಸ್ತುಗಳನ್ನು ಮುಚ್ಚಿಟ್ಟುಕೋ ಎಂದಾಗಿ ಹೇಳಿರುವುದು ಸಮಂಜಸವಾಗಿದೆ.

ಹಾಕಿದ್ದು ನೀ ಉಂಡು ಬೇಕೆಂದು ಬೇಡದಿರು
ಸಾಕು ಸಾಕು ಎಂಬಾ ನಾಚಿಕೆಯ ಹಿಡಿಯೆ ॥
ನಾಕು ಮಂದಿಯರೊಡನೆ ಕೋಕೆ ಮಾತಾಡದಿರು
ಲೋಕದೊಳಿವಳೊಬ್ಬ ಮೂಕಿಯೆಂದೆನಿಸಿ ॥

ಮನೆಯಲ್ಲಿ ಊಟಕ್ಕೆ ಹಾಕುವಾಗ ಅದು ಬೇಕು, ಇದು ಬೇಕು ಎಂದು ಬೇಡುವದು ಸರಿಯಲ್ಲ. "ಸಾಕು" ಎಂಬ ಮಾತು ಹೆಜ್ಜೆ ಹೆಜ್ಜೆಗೆ ನೆನಪಿರಲಿ "ನಾಚಿಕೆ" ಇರಲಿ ಅದು ಸ್ತ್ರೀಗೆ ಭೂಷಣ. ಇನ್ನು ನಾಲ್ಕು ಜನರ ಜೊತೆ ಮಾತಾಡುತ್ತಿರುವಾಗ ಕೊಕ್ಕೆ ಮಾತುಗಳನ್ನು ಅಂದರೆ ಇನ್ನೊಬ್ಬರ ಮನನೋಯಿಸುವ ಮಾತುಗಳನ್ನು ಆಡದಿರು. ಹೆಚ್ಚು ಮಾತುಗಳೂ ಬೇಡ ಲೋಕದಲ್ಲಿ ಇವಳೊಬ್ಬ ಮೂಕಿಯೆನಿಸುವಂತೆ ಇರು: ಅವಶ್ಯವಿದ್ದಷ್ಟು ಮಾತ್ರ ಮಾತಿರಲಿ, ಅನವಶ್ಯಕ ಮಾತುಗಳೇ ಬೇಡ.

ಇಷ್ಟರು ಅಂದರೂ ನಿಷ್ಠುರವಾಡದಿರು ।
ಘಟ್ಟಿ ಮಾಡಮ್ಮ ನಿನ್ನ ಮನಸು ॥
ಸೃಷ್ಟಿಯೊಳಗೆ ನಮ್ಮ ಪುರಂದರವಿಠ್ಠಲನ್ನ
ಶ್ರೇಷ್ಠನಾದ ಕೃಷ್ಣನ್ನ ತಂಗಿಯೆಂದೆನಿಸು ॥

ನೆಂಟರು ಇಷ್ಟರು ಕೆಲವು ವೇಳೆ ಬೇಡಾದ ಮಾತುಗಳನ್ನು ಆಡುವದುಂಟು ಆದರೆ ನೀನು ಮಾತ್ರ ಅವರಿಗೆ ನಿಷ್ಠುರವಾದ, ಕಟುವಾದ ಮಾತುಗಳನ್ನಾಡಬೇಡ ನಿನ್ನ ಮನಸ್ಸು ಘಟ್ಟಿ ಮಾಡಿಕೋ. ಆ ಮಾತುಗಳನ್ನು ಹೊಟ್ಟೆಯಲ್ಲಿ ಹಾಕಿಕೋ ಈ (ಸೃಷ್ಟಿಯಲ್ಲಿ) ಜಗತ್ತಿನಲ್ಲಿ ಸರ್ವೋತ್ತಮನಾದ ಶ್ರೀಕೃಷ್ಣನ ಶ್ರೇಷ್ಠ ತಂಗಿ ಎಂಬ ಹೆಸರು ಪಡೆದುಕೋ, ಅದುವೇ ನಿನಗೆ ಸಾರ್ಥಕ ಬಾಳನ್ನು ತಂದುಕೊಡುತ್ತದೆ.

ಶ್ರೀ ಪುರಂದರದಾಸರು ಬೇರೊಂದು ಪದ್ಯದಲ್ಲಿ –

" ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ ಮಗಳೇ ಮನಶುದ್ಧಳಾಗಿ ಗಂಡನೊಡನೆ ಬಾಳ ಬೇಕಮ್ಮ"ಎಂದಾಗಿ ಹೇಳುತ್ತ ಮನೆಯಲ್ಲಿ

ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ । ಮಗಳೇ
ಚಿತ್ತದೊಲ್ಲಭನಕ್ಕರೆಯನು ಪಡೆಯಬೇಕಮ್ಮ ॥
ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ । ಮಗಳೆ
ಹತ್ತು ಮಂದಿ ಒಪ್ಪುವ ಹಾಗೆ ದುಡಿಯಬೇಕಮ್ಮ ॥ ಎನ್ನುತ್ತಾರೆ.

ಸೊಸೆಯಾಗಿ ಅತ್ತೆಯ ಮನೆಯನ್ನು ಸೇರಿದ ಸ್ತ್ರೀ ತನ್ನ ಅತ್ತೆ ಮಾವಂದಿರಿಗೆ ಅಂಜಿಕೊಂಡು ಅವರು ಹೇಳಿದಂತೆ ನಡೆಯಬೇಕು. ಹಾಗೆಯೇ ತನ್ನ ಕರ್ತವ್ಯ ಕರ್ಮಗಳನ್ನು ಸರಿಯಾಗಿ ಮಾಡುತ್ತ ಗಂಡನ ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕು. ನಾಲ್ಕು ಜನರಲ್ಲಿ ಮಾತಾಡುವಾಗ ವಿಚಾರಿಸಿ ಮಾತಾಡಬೇಕು. ಆ ಮಾತು ಹತ್ತು ಜನಕ್ಕೆ ಒಪ್ಪಿಗೆಯಾಗುವಂತಿರಬೇಕು.

ಕೊಟ್ಟು ಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ । ಮಗಳೆ
ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ ॥
ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ । ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥2॥

ಕೊಡುವ ತೆಗೆದುಕೊಳ್ಳುವ ಸಂಬಂಧಿಕರೊಡನೆ ದ್ವೇಷಕಟ್ಟಿಕೊಳ್ಳಕೂಡದು. ಅಡಿಗೆ ಮಾಡಿ ಊಟ ಮಾಡುವ ಕಾಲದಲ್ಲಿ ಆ ಭಗವಂತ ಕೊಟ್ಟದ್ದು ಎಂದಾಗಿ ನೆನೆಸಿಕೊಂಡು ಮಾಡಿದಡಿಗೆಯನ್ನು ಅವನಿಗೆ ಸಮರ್ಪಿಸಿ ಉಣಬೇಕು. ನಿತ್ಯವೂ ತನ್ನ ಮನೆ ಬಾಗಿಲಲ್ಲಿ ಬಂದು ನಿಲ್ಲಬಾರದು. ಅದು ಗೃಹಿಣಿಯಾದವಳಿಗೆ ಶೋಭಿಸದು ಮತ್ತು ಬಾಳುವೆ ಮಾಡುವ ಗಂಡನ ಜೊತೆಯಲ್ಲಿ ಸಿಟ್ಟು ಮಾಡಕೂಡದು. ಅವನನ್ನು ಪತಿದೇವರೆಂದು ತಿಳಿದು ಅವನು ಹೇಳಿದ ಮಾತನ್ನು ಶಿರಸಾ ವಹಿಸಬೇಕು. "ಮಾತು ಬಂದಾಗ ಸೋತು ಹೋದವನೇ ಜಾಣ" ಉಕ್ತಿಯಂತೆ ಸೋತು ಹೋಗಿ ಗಂಡನ ಪ್ರೀತಿ ಸಂಪಾದಿಸಿ ಜಾಣತನದಿಂದ ವರ್ತಿಸಬೇಕು.

ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ । ಮಗಳೇ
ಗರುವ ಕೋಪ ಮತ್ಸರವನು ಮಾಡಬೇಡಮ್ಮ ॥
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ । ಮಗಳೇ
ಗುರು ಪುರಂದರ ವಿಠ್ಠಲನ ಸ್ಮರಣೆಯ ಮರೆಯಬೇಡಮ್ಮ ॥3॥

ಸ್ತ್ರೀಯಾದವಳು ನೆರೆಹೊರೆಯವರ ಜೊತೆಯಲ್ಲಿ ಜೋಕೆಯಿಂದ ವರ್ತಿಸಬೇಕು. ಅವರಿಗೆ ನ್ಯಾಯ, ಅನ್ಯಾಯಗಳ ಕುರಿತು ಹೇಳಕೂಡದು. ಸ್ತ್ರೀಗೆ ಗರ್ವ, ಸಿಟ್ಟು, ಮತ್ಸರ (ಅನ್ಯಶುಭದ್ವೇಷೋ ಹಿ ಮತ್ಸರಃ) ಇವು ಯಾವವೂ ಶೋಭಿಸುವದಿಲ್ಲ. ಅವು ಹತ್ತಿರ ಸುಳಿಯಕೂಡದು. ಇನ್ನೊಬ್ಬರಿಗೆ ಒಳ್ಳೆಯದಾದರೆ ಆಗಲಿ, ಅವರಿಗೆ ಹಾಗೆ ಆಗಬಾರದೆಂದು ಬಯಸುವದಾಗಲಿ, ಅವರ ದ್ವೇಷ ಮಾಡುವದಾಗಲಿ ಮಾಡಬಾರದು. ಸ್ತ್ರೀಗೆ ಅಹಂಕಾರ ಸಲ್ಲದು ಪತಿಯ ಪ್ರೀತಿ ಸಂಪಾದಿಸಲು ಅದು ಪ್ರತಿಬಂಧಕವಾಗುವ ಸಾಧ್ಯತೆ ಇದೆ. ಹಾಗೆಯೇ ಸಿಟ್ಟು ಕೂಡ ಸಲ್ಲದು. ಎಲ್ಲವೂ ಭಗವದಧೀನ ಎಂದು ತಿಳಿದು ಬಾಳುವೆ ನಡೆಸಬೇಕು. ಇನ್ನು ಪರಪುರುಷರನ್ನು ಬೇರೆ ಜನಗಳನ್ನು ನಿಂದಿಸುವ ಹೆಣ್ಣುಮಕ್ಕಳ ಜೊತೆಗೆ ಯಾವ ಕಾಲದಲ್ಲಿಯೂ ಸ್ನೇಹ ಬೆಳಸಿಕೊಳ್ಳಬಾರದು. ಸೇರಬಾರದು ಕೂಡ. ಅದುಖಂಡಿತವಾಗಿಯೂ ಒಳ್ಳೆಯದಲ್ಲ. ಅಂಥ ಹೆಣ್ಣುಮಕ್ಕಳ ಜೊತೆ ಸೇರಿದರೆ ಒಂದಿಲ್ಲ ಒಂದುದಿನ ಕೆಟ್ಟ ಹೆಸರು ತಂದುಕೊಡುವದು ನಿಶ್ಚಿತ. ಇದು ಪತಿ, ಬಂಧುಬಾಂಧವರನ್ನು ದೂರ

ಮಾಡಿಬಿಡುತ್ತದೆ. ಕಾರಣ ಪತಿಸೇವೆ, ಬಂಧುಗಳ, ಅತ್ತೆ ಮಾವಂದಿರ ಸೇವೆ ಮಾಡುತ್ತ ಶ್ರೀಹರಿಯ ಸ್ಮರಣೆಯನ್ನು ಕೂಡ ಬಿಡದೆ ಸಂಸಾರ ಮಾಡಿದ್ದಾದರೆ ಅಂಥ ಸ್ತ್ರೀಯು ಇಹ ಪರಗಳೆರಡನ್ನೂ ಅಂದರೆ ಶ್ರೇಯಸ್ಸನ್ನು ಹೊಂದುವುದರಲ್ಲಿ ಸಂದೇಹವಿಲ್ಲ.

"ಹರಿಃ ಸ್ಮೃತಿಃ ಸರ್ವವಿಪದ್ವಿಮೋಕ್ಷಿಣೀ" ಎಂಬ ಶ್ರೀಮದ್‌ಭಾಗವತಕಾರರ ಮಾತನ್ನು ಹಾಗೂ "ಹರಿ ಸ್ಮರಣೆ ಮಾಡೋ ನಿರಂತರ" ಎಂಬ ಅವರದೇ ಉಕ್ತಿಯನ್ನು ಮನದಲ್ಲಿಟ್ಟು ಸಂಸಾರ ಮಾಡಬೇಕೆಂಬುದಾಗಿ ಶ್ರೀ ಪುರಂದರದಾಸರು ಈ ಪದ್ಯದಲ್ಲಿ ತಿಳಿಸಿಕೊಟ್ಟಿದ್ದಾರೆ.

ಶ್ರೀಪುರಂದರದಾಸರು ತಮ್ಮ ಇನ್ನೊಂದು ಪದ್ಯದಲ್ಲಿ–

"ಪತಿಭಕ್ತಿ" ಇಲ್ಲದ ಸ್ತ್ರೀಯರ ಸಂಗ ಸುಖತಂದುಕೊಡಲಾರದು. ಎನ್ನುವ ಮಾತು ಮಾರ್ಮಿಕವಾಗಿದೆ.

ಪತಿಭಕುತಿ ಇಲ್ಲದಿಹ ಸತಿಯ ಸಂಗ ।
ವ್ರತಗೆಟ್ಟು ಸುಖ ಪಡೆಯಲಿಲ್ಲವೋ ರಂಗ ॥ ಪ॥

"ಪತಿರೇವ ಹಿ ನಾರೀಣಾಂ ದೈವತಂ ಪರಮಂ ಸ್ಮೃತಮ್ " (6–18–33) ಎಂಬ ಶ್ರೀಮದ್‌ಭಾಗವತೋಕ್ತಿಯಂತೆ ಸ್ತ್ರೀಯರಿಗೆ ಪತಿಯೇ ಶ್ರೇಷ್ಠ ದೇವತೆಯಾಗಿದ್ದಾನೆ. ಕಾರಣ ಇಂಥ ಪತಿಯಲ್ಲಿ ಭಕ್ತಿಯೇ ಇಲ್ಲದ ಸ್ತ್ರೀಯಳ ಸಂಗ ಮಾಡಿದ್ದಾದರೆ ಅದು ಸುಖಕ್ಕೆ ಕಾರಣವಾಗಲಾರದು. ಅಂಥವರಿಗೆ ಜೀವನದಲ್ಲಿ ಸುಖ ಸಿಗುವುದೇ ಇಲ್ಲ.

ಗಂಡ ಬಂದರೆ ಎದ್ದು ನಿಲ್ಲದೇ ಆ ಕ್ಷಣದಿ ।
ಕಂಡು ಆಡಿ ಏಕವಚನಂಗಳಾಗ ॥
ಅಂಡಲೆದು ಮಾರ್ಮಲೆದು ಕಾಡಿ ಬೇಡುವ ಇಂಥ ।
ಭಂಡುದೊತ್ತಿನ ಕೂಟ ಏಳು ನಾಗರಕಾಟ.॥

ಸ್ತ್ರೀಯ ಧರ್ಮವನ್ನಿಲ್ಲಿ ತಿಳಿಸುತ್ತಿದ್ದಾರೆ ಶ್ರೀ ದಾಸರು. ಸ್ತ್ರೀಯಾದವಳು ತನ್ನ ಗಂಡ ಮನೆಗೆ ಬಂದಾಗ ತಾನು ಎದುರುಗೊಂಡು ಮುಗುಳುನಗೆಯಿಂದ ಸ್ವಾಗತಿಸಿ ಉಪಚರಿಸಬೇಕು. ಹೀಗೆ ಮಾಡದೇ ಗಂಡ ಮನೆಗೆ ಬಂದಾಗ ತಾನು ಎದ್ದು ನಿಲ್ಲದೇ ಆ ಕ್ಷಣದಲ್ಲಿ ಅವನಿಗೆ ಏಕವಚನದಿಂದ ಮಾತುಗಳನ್ನಾಡಿ ಯಾವುದೋ ತನಗೆ ಬೇಕಾದ ಪದಾರ್ಥಗಳ ಕುರಿತು ಬೇಕು ಬೇಕೆಂದು ಕಾಡಿ ಬೇಡಿ ಭಂಡಳಂತೆ ಓಡಾಡಿ ಅವನನ್ನು ಸುತ್ತಿದ್ದಾದರೆ ಅದು ಗಂಡನಿಗೆ ಏಳುನಾಗರಹಾವಿನಕಾಟದಂತೆ ಭಾಸವಾಗುವುದರಲ್ಲಿ ಆಶ್ಚರ್ಯವೇನಿಲ್ಲ.

ತಾಯನು ಹೊರಡಿಸು ತಂದೆಯನು ತೆರಳಿಸು ।
ದಾಯಾದಿಯನು ಮನೆಯಲಿರಿಸಬೇಡ ।
ಬಾಯಿಯನ್ನು ಮನೆಕಟ್ಟಿ ಬೇರಿರುವ ನಾವೆಂಬ ।
ಮಾಯಕಾತಿಯ ಸಂಗ ಅಭಿಮಾನ ಭಂಗ ॥

ಈಗಿನ ಜನರ ಮನಸ್ಥಿತಿ ಇರುವಂತೆ ಶ್ರೀ ದಾಸರ ಕಾಲದಲ್ಲಿಯೂ ಕೆಲವರಿದ್ದರೆಂಬುದು ಈ ನುಡಿಯಿಂದ ತಿಳಿದುಬರುತ್ತದೆ.

ಸ್ತ್ರೀಯಾದವಳು ಪತಿಯ ತಂದೆ ತಾಯಿಯವರ ಜೊತೆಯಲ್ಲಿ ಇರಬೇಕು. ಆದರೆ " ನಿಮ್ಮ ತಾಯಿಯನ್ನು , ತಂದೆಯನ್ನು ಹೊರಗೆಕಳಿಸಿಬಿಡಿ , ಬಂಧುಗಳು ನಮ್ಮ ಮನೆಯಲ್ಲಿ ಇರುವದು ಬೇಡ " ಎಂದು ಹೇಳುತ್ತ. ಗಂಡನ ಬಂಧುಗಳನ್ನು ಹೊರಗೆ ಹಾಕಿದ ಅಂಥ ಸ್ತ್ರೀಯ ಸಹವಾಸ ಅಭಿಮಾನ ಭಂಗವೆನಿಸುತ್ತದೆ.ಯೋಗ್ಯವೆನಿಸುವದಿಲ್ಲ ನಿಶ್ಚಿತ.

ಸ್ತ್ರೀಯಾದವಳು ತನ್ನ ಕರ್ತವ್ಯಕರ್ಮಗಳೆಲ್ಲವನ್ನು ತಿಳಿದುಕೊಂಡು ಪತಿಸೇವೆ ಮಾಡುತ್ತ, ಅತ್ತೆ ಮಾವಂದಿರ ಸೇವೆ ಮಾಡುತ್ತ ಇಹಪರಗಳೆರಡರಲ್ಲಿಯೂ ಶ್ರೇಯಸ್ಸನ್ನು ಹೊಂದಬೇಕು.

ಶ್ರೀಮಧ್ವೇಶಾರ್ಪಣಮಸ್ತು

****

# ಭಾಗ- 4

## ಸ್ತ್ರೀಯರ ನಿತ್ಯ ಆಚರಣೆ, ಜಪ ಕ್ರಮ ಇತ್ಯಾದಿ

ಸ್ತ್ರೀಯರು ಪ್ರಾತಃಕಾಲದಲ್ಲಿ ಬೇಗ ಎದ್ದು ಉದಯರಾಗ ಹೇಳಿ ಮನೆಯ ಮುಂದೆ ಸಾರಿಸಿ, ರಂಗವಲ್ಲಿ ಹಾಕಿ, ಪೂಜಾ ಅಡಿಗೆ ಸಾಮಗ್ರಿಗಳನ್ನು ಸ್ವಚ್ಛವಾಗಿ ತಿಕ್ಕಿ ಸಿದ್ಧಪಡಿಸಿಕೊಂಡು ಸ್ನಾನಕ್ಕೆ ಅಣಿಯಾಗಬೇಕು.

ಮನೆಯಲ್ಲಿ ಸ್ನಾನ ಮಾಡುವುದಾದಲ್ಲಿ "ಗಂಗಾಳ"ದಲ್ಲಿ (ಬಕೀಟನಲ್ಲಿ) ಮೊದಲು ಒಂದು ತಂಬಿಗೆ ತಣ್ಣೀರು ಹಾಕಿ, ಅದರಲ್ಲಿ ಬಿಸಿ ನೀರು ಸುರುವಿ ಮತ್ತೆ ಒಂದು ತಂಬಿಗೆ ತಣ್ಣೀರು ಹಾಕಿ ಇಟ್ಟುಕೊಳ್ಳಬೇಕು. ಆ ನೀರಲ್ಲಿ ಭಾಗೀರಥೀ ಸನ್ನಿಧಾನ ಉಂಟೆಂದು ಭಾವಿಸಬೇಕು.

ಸ್ನಾನ ಸಂಕಲ್ಪವನ್ನು ಹೀಗೆ ಮಾಡಬೇಕು –

ಶ್ರೀಗೋವಿಂದ ಗೋವಿಂದ ಶ್ರೀಮದ್ಭಗವತೋ ಮಹಾಪುರುಷಸ್ಯ ಶ್ರೀವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯ ಬ್ರಹ್ಮಣಃ ದ್ವಿತೀಯ ಪರಾರ್ಧೇ, ಶ್ರೀಶ್ವೇತವರಾಹಕಲ್ಪೇ, ವೈವಸ್ವತಮನ್ವಂತರೇ ಕಲಿಯುಗೇ, ಪ್ರಥಮಚರಣೇ, ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ದಂಡಕಾರಣ್ಯೇ ದೇಶೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನ ಶಕೆ ಬೌದ್ಧಾವತಾರೇ, ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ..........ಸಂವತ್ಸರೇ............ಆಯನೇ....... ಋತೌ.............ಮಾಸೇ...........ಪಕ್ಷೇ...........ತಿಥೌ.......ವಾಸರೇ, ಶುಭ ನಕ್ಷತ್ರೇ, ಶುಭಯೋಗೇ, ಶುಭಕರಣೇ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಗಂಗಾ (ಭಾಗೀರಥೀ) ಸ್ನಾನಮಹಂ ಕರಿಷ್ಯೇ ।

ನದೀ, ಸರೋವರಗಳಲ್ಲಿ ಸ್ನಾನ ಮಾಡುವುದಾದರೆ–ಮೇಲಿನಂತೆ ಸಂಕಲ್ಪ ಮಾಡಿ– ಸ್ನಾನಕ್ಕೆ ಅನುಜ್ಞೆಯನ್ನು ಕೇಳಬೇಕು.

ಕಣಕಾಲುದ್ದಾ ನೀರಾಗ ಶೇಷದೇವರ ಸನ್ನಿಧಾನ, ಮೊಣಕಾಲುದ್ದಾ ನೀರಾಗ ಗರುಡದೇವರ ಸನ್ನಿಧಾನ । ಎದೆ ಉದ್ದ ನೀರಾಗ ಲಕ್ಷ್ಮೀನಾರಾಯಣ ದೇವರ ಸನ್ನಿಧಾನ, ಅಂತಾ ಅನುಸಂಧಾನ ಮಾಡಿ ತೀರ್ಥಮೂರ್ತಿ, ವೈಕುಂಠಮೂರ್ತಿ, ವೈರಾಗ್ಯಮೂರ್ತಿ ಪಾದದಿಂದ ಹುಟ್ಟಿ, ಸ್ವರ್ಗಲೋಕದಿಂದ ಇಳಿದು ಬಂದಂಥ ಭಾಗೀರಥಿಯೇ ಮೈ ತೊಳೆಯಲು ನನಗೆ ಅನುಜ್ಞೆ ಕೊಡು ಎಂದು ಕೇಳಿಕೊಂಡು ಸ್ನಾನ ಮಾಡಬೇಕು. (ನದಿಯಲ್ಲಿ ಸ್ನಾನ ಮಾಡುವಾಗ ನದೀತಾರತಮ್ಯ ಸ್ತೋತ್ರ, ಭಾಗೀರಥೀ ಸ್ತೋತ್ರ, ಹೇಳಬೇಕು.)

ನಂತರ ಅರ್ಘ್ಯ ಕೊಡಬೇಕು –
ನಮಸ್ತೇ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇऽಸ್ತು ಹೃಷಿಕೇಶ ಗೃಹಾಣಾರ್ಘ್ಯಂ ನಮೋऽಸ್ತುತೇ ॥

ಸ್ನಾನ ಮಾಡಿ ಮೇಲೆ ಬರುವಾಗ –
ಹತ್ತಿ ಬರುವಾಗ ಅಚ್ಯುತನ್ನ ಕಂಡೆ । ತಿರುಗಿ ನೋಡಿ ತ್ರಿವಿಕ್ರಮನ ಕಂಡೆ ।
ಹಿಂದೆ ನೋಡಿ ಬಿಂದು ಮಾಧವನ್ನ ಕಂಡೆ । ಕಂಕಣ ಕೈಯಾಕಿನ್ನ ಕಂಡೆ ।
ಕುಂಕುಮಫಣಿಯಾಕಿನ್ನಕಂಡೆ । ಅರಿಷಿಣ ಕುಂಕುಮ ಫಲಕೊಟ್ಟು ತಾಯಿ ನಮ್ಮವ್ವ
ಗಂಗಾ ಭಾಗೀರಥೀ ನಿನ್ನ ಅನುಗ್ರಹ ಇರಲಿ ॥ ಎಂದಾಗಿ ಪ್ರಾರ್ಥಿಸಬೇಕು.

ಸ್ನಾನದ ನಂತರ ಶುದ್ಧವಾದ ಒಣಗಿದ ಬಟ್ಟೆ ಉಟ್ಟುಕೊಂಡು, ಆಸನದಲ್ಲಿ ಕುಳಿತು ಒಂದು ಬೊಟ್ಟು ಕುಂಕುಮ ಇಟ್ಟುಕೊಂಡು ನಂತರ ಗೋಪೀಚಂದನದಿಂದ ಅಥವಾ ಶ್ರೀವೆಂಕಪ್ಪನ ನಾಮದಿಂದ ಹಣೆಯಲ್ಲಿ ಒಂದು ಊರ್ಧ್ವಪುಂಡ್ರ ಹಚ್ಚಿಕೊಂಡು ಗದಿಯನ್ನು ಧರಿಸಬೇಕು.

**ಗದಿಮಂತ್ರ :** ಅನಂತಾಸನ, ಶ್ವೇತದ್ವೀಪ, ವೈಕುಂಠ ಇಂಥಲ್ಲಿ ಇಲ್ಲದ ಗದಿ ಎಲ್ಲಿ ಇರುವದು ಅಂದರೆ ನಾರಾಯಣನ ಕರದಲ್ಲಿ. ಆ ಗದಿಯನ್ನು ಮುತ್ತೈದೆಯರು ಹಚ್ಚಿಕೊಂಡರೆ ಮೂರೂ ಕೋಟಿ ಪುಣ್ಯ ಬರುವದು. ವಿಪ್ರರು ಹಚ್ಚಿಕೊಂಡರೆ ವೇದಪಾರಂಗತರು ಆಗುವರು. ಸನ್ಯಾಸಿಗಳು ಹಚ್ಚಿಕೊಂಡರೆ ಮೋಕ್ಷಕ್ಕೆ ಹೋಗುವರು. ಬಿಂದುಮಾಧವನ ದರುಶನ ಕಾಶಿಗೆ ಹೋದಷ್ಟು ಪುಣ್ಯ ಹತ್ತದ, ಪಾಪ ಹಾರತದ ಇತಿ ಗದಿ ಸ್ತೋತ್ರಂ ಸಂಪೂರ್ಣಂ ॥

**ಕುಂಕುಮ ಧಾರಣ :** ಅದ್ಯ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಪತ್ಯಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಪತ್ಯುರಾಯುಷ್ಯಾಭಿವೃದ್ಧ್ಯರ್ಥಂ ಶ್ರೀಲಕ್ಷ್ಮೀಸನ್ನಿಧಾನ ಪ್ರಾಪ್ತ್ಯರ್ಥಂ ಊರ್ಧ್ವಪುಂಡ್ರಸಹಿತ ಕುಂಕುಮ ಧಾರಣಾಖ್ಯಂ ಕರ್ಮಕರಿಷ್ಯೇ ॥ ಎಂದು ಸಂಕಲ್ಪ ಮಾಡಿ

ರಮಾಂ ಅಪರ್ಣಾಂ ಸಾವಿತ್ರೀಂ ವೈದೇಹೀಂ ಚ ಅರುಂಧತೀಂ ।
ಸೌಭಾಗ್ಯಾಯ ನಮಸ್ಕೃತ್ಯ ಕುಂಕುಮಂ ಧಾರಯಾಮ್ಯಹಂ ॥

ಎಂದು ಹೇಳುತ್ತ ಅರಿಷಿಣ ಮತ್ತು ಕುಂಕುಮ ಹಚ್ಚಿಕೊಳ್ಳಬೇಕು.

ಸುಮಂಗಲಿಯರು ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸುವುದರಿಂದ ಪತಿಯ ಆಯುಷ್ಯವು ವರ್ಧಿಸುತ್ತದೆ ಮತ್ತು ಹಣೆಯಲ್ಲಿ ಕುಂಕುಮವನ್ನು ಧರಿಸುವದರಿಂದ ಸದಾ ಲಕ್ಷ್ಮಿಯ ಸನ್ನಿಧಾನವಿರುವದು. ಸಕಲ ಸಂಪತ್ತಿಗೆ ಕಾರಣವಾಗುವದು.[1]

**ಗುರುಮಂತ್ರ** : ಶ್ರೀ ಗುರುಭ್ಯೋ ನಮಃ ॥ (ಪೂರ್ವ ಅಥವಾ ಉತ್ತರಕ್ಕೆ ಮುಖ ಮಾಡಿ ಕುಳಿತು) ಆಚಮನ–ದ್ವಿರಾಚಮ್ಯ 1. ಕೇಶವಾಯ ಸ್ವಾಹಾ 2. ನಾರಾಯಣಾಯ ಸ್ವಾಹಾ 3. ಮಾಧವಾಯ ಸ್ವಾಹಾ 4. ಗೋವಿಂದಾಯ ನಮಃ (1 ತೀರ್ಥಸವುಟು ನೀರು ಬಿಡಬೇಕು.) 5. ವಿಷ್ಣವೇ ನಮಃ 6. ಮಧುಸೂದನಾಯ ನಮಃ 7. ತ್ರಿವಿಕ್ರಮಾಯ ನಮಃ, 8. ವಾಮನಾಯ ನಮಃ 9. ಶ್ರೀಧರಾಯ ನಮಃ 10, ಹೃಷೀಕೇಶಾಯ ನಮಃ, 11. ಪದ್ಮನಾಭಾಯ ನಮಃ 12, ದಾಮೋದರಾಯ ನಮಃ , 13 ಸಂಕರ್ಷಣಾಯ ನಮಃ 14. ವಾಸುದೇವಾಯ ನಮಃ 15. ಪ್ರದ್ಯುಮ್ನಾಯ ನಮಃ 16. ಅನಿರುದ್ಧಾಯ ನಮಃ 17. ಪುರುಷೋತ್ತಮಾಯ ನಮಃ 18. ಅಧೋಕ್ಷಜಾಯ ನಮಃ . 19. ನಾರಸಿಂಹಾಯ ನಮಃ 20. ಅಚ್ಯುತಾಯ ನಮಃ 21. ಜನಾರ್ದನಾಯ ನಮಃ 22. ಉಪೇಂದ್ರಾಯ ನಮಃ 23, ಹರಯೇ ನಮಃ 24. ಶ್ರೀಕೃಷ್ಣಾಯ ನಮಃ ॥

ಶ್ರೀಗೋವಿಂದ......ಅದ್ಯ ಬ್ರಹ್ಮಣಃ......ಶುಭತಿಥೌ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಗುರುಮಂತ್ರ ಜಪಂ ಕರಿಷ್ಯೇ ॥

**ಭೂತೋಚ್ಚಾಟನಮ್** – ಮಮ ಶರೀರಸ್ಯ ಅಂತರ್ಯಾಮಿ ಋಷಿಃ । ಸತ್ಯೋದೇವತಾ ಪ್ರಕೃತಿ ಪುರುಷಶ್ಛಂಧಃ । ಸಮಸ್ತ ಭೂತೋಚ್ಚಾಟನೇ ವಿನಿಯೋಗಃ ।

ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿಸಂಸ್ಥಿತಾಃ । ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ । ಅಪಕ್ರಾಮಂತು ಭೂತಾದ್ಯಾಃ ಕ್ರೂರಾಶ್ಚೈವ ತು ರಾಕ್ಷಸಾಃ । ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥

---

1. ಊರ್ಧ್ವಪುಂಡ್ರಂ ಲಲಾಟೇ ತು ಭರ್ತುರಾಯುಷ್ಯವರ್ಧಕಂ ।
ಲಲಾಟೇ ಕುಂಕುಮಶ್ಚೈವ ಸದಾಲಕ್ಷ್ಮೀನಿವಾಸಕಮ್ ॥

ಪೃಥಿವ್ಯಾ ಮೇರು ಪೃಷ್ಠಋಷಿಃ । ಕೂರ್ಮೋದೇವತಾ । ಸುತಲಂ ಛಂದಃ । ಆಸನೇ ವಿನಿಯೋಗಃ । ಪೃಥ್ವಿತ್ವಯಾ ಧೃತಾಲೋಕಾ ದೇವಿತ್ವಂ ವಿಷ್ಣುನಾ ಧೃತಾ । ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರುಚಾಸನಂ । ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ । ಆಸನೇ ಸೋಮ ಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ ।

ಶ್ರೀಂ ಅಂ ಅನಂತಾಸನಾಯ ನಮಃ । ಶ್ರೀಂ ಮಂ ಮಂಡೂಕಾಯ ನಮಃ । ಶ್ರೀಂ ಕುಂ ಕೂರ್ಮಾಯ ನಮಃ । ಶ್ರೀ ವಂ ವರಾಹಾಯ ನಮಃ । ಶ್ರೀಂ ಶಂ ಶೇಷಾಯ ನಮಃ । ಶ್ರೀಂ ಕಂ ಕಾಲಾಗ್ನಿ ರುದ್ರಾಯ ನಮಃ । ಶ್ರೀಂ ವಂ ವಜ್ರಾಯ ನಮಃ ॥

ಐಂದ್ರಿಯಾದಿ ದಶದಿಕ್ಷು ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ ॥
ಅಸ್ತ್ರಾಯ ಫಟ್ ಇತಿ ದಿಗ್ಬಂಧಃ ।
ಮಣಿಬಂಧೇ ಪ್ರಕೋಷ್ಠೇ ಚ ಕೂರ್ಪರೇ ಹಸ್ತ ಸಂಧಿಷು ।
ತತ್ ಪೃಷ್ಠಪಾರ್ಶ್ವಯೋಶ್ಚೈವ ಕರಶುದ್ಧಿರುದಾಹೃತಾ ॥

ಶ್ರೀಂ ಯಂ ಶ್ರೀಂ (ಆರು ಸಲ) ಶ್ರೀಂ ರಂ ಶ್ರೀಂ (ಆರು ಸಲ) ಶ್ರೀಂ ವಂ ಶ್ರೀಂ (ಆರು ಸಲ) ಜಪಿಸುತ್ತ ಮುಂಗೈ ಪ್ರಾರಂಭ ಮಾಡಿ ಬಟ್ಟುಗಳ ಕೊನೆಯವರೆಗೆ ಎರಡೂ ಕೈಗಳ ಕೆಳಗೆ ಮುಟ್ಟಬೇಕು.

**ಗುರುನಮಸ್ಕಾರ :** ಶ್ರೀ ಗುರುಭ್ಯೋ ನಮಃ ಪರಮಗುರುಭ್ಯೋ ನಮಃ, ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯೇಭ್ಯೋ ನಮಃ ಶ್ರೀವೇದವ್ಯಾಸಾಯ ನಮಃ, ಶ್ರೀಭಾರತ್ಯೈ ನಮಃ, ಶ್ರೀಸರಸ್ವತ್ಯೈ ನಮಃ, ಶ್ರೀವಾಯವೇ ನಮಃ, ಶ್ರೀಬ್ರಹ್ಮಣೇ ನಮಃ ಶ್ರೀಲಕ್ಷ್ಮ್ಯೈ ನಮಃ, ಶ್ರೀನಾರಾಯಣಾಯ ನಮಃ, ಶ್ರೀಕೃಷ್ಣಾಯನಮಃ ಶ್ರೀವಾಸುದೇವಾಯ ನಮಃ ॥

**ಪಾಪಪುರುಷ ವಿಸರ್ಜನಂ** – ಹೃತ್ಕಮಲದಲ್ಲಿರುವ ನಾರಾಯಣನನ್ನು ಸುಷುಮ್ನಾ[2] ನಾಡಿಯ ಮಾರ್ಗವಾಗಿ ಶಿರಸ್ಸಿಗೆ ತಂದು ನಿಲ್ಲಿಸಿದಂತೆ ಭಾವಿಸಬೇಕು.

ಹೊಟ್ಟೆಯ ಎಡಭಾಗವನ್ನು ಮುಟ್ಟಿ – ಬ್ರಹ್ಮಹತ್ಯಾ ಶಿರಸ್ಕಂಚ ಸ್ವರ್ಣಸ್ತೇಯಂ ಭುಜದ್ವಯಂ । ಸುರಾಪಾನ ಹೃದಾಯುಕ್ತಂ ಗುರುತಲ್ಪ ಕಟಿದ್ವಯಂ । ತತ್ಸಂಯೋಗ ಪದದ್ವಂದ್ವಮಂಗಪ್ರತ್ಯಂಗ ಪಾತಕಂ । ಉಪಪಾತಕ ರೋಮಾಣಂ ರಕ್ತಶ್ಮಸ್ರುವಿಲೋಚನಂ । ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌಪಾಪಂ ವಿಚಿಂತಯೇತ್ ।

---

2. ಸುಷುಮ್ನಾ ನಾಡಿ – ಮೂಲಾಧಾರದಿಂದ ಹೊರಟು, ದೇಹದ ಮಧ್ಯಭಾಗದಲ್ಲಿ ನೇರವಾಗಿ ಬ್ರಹ್ಮರಂಧ್ರ ಪರ್ಯಂತ ವ್ಯಾಪಿಸಿರುವ ಮಧ್ಯನಾಡಿಗೆ "ಸುಷುಮ್ನಾ ನಾಡಿ" ಎಂದು ಹೆಸರು.

ಹೊಕ್ಕಳನ್ನು ಮುಟ್ಟಿ - ಷಟ್ಕೋಣ ಮಂಡಲ ಮಧ್ಯಸ್ಥೋ ನೀಲವರ್ಣೋ ವಾಯುಬೀಜವಾಚ್ಯಃ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು । ಎಂದು ಹೇಳಿ ಶ್ರೀ ಯಂ ಶ್ರೀಂ ಎಂದು 6 ಸಲ ಹೇಳಿ ಪಾಪ ಪುರುಷನು ಒಣಗಿದನೆಂದು ಭಾವಿಸಬೇಕು.

ತತಸ್ತಂ ಹೃದಯದೇಶಮಾನೀಯ (ಅವನನ್ನು ಹೃದಯ ದೇಶಕ್ಕೆ ತಂದು) ಹೃದಯೇ ತ್ರಿಕೋಣ ಮಂಡಲಮಧ್ಯಸ್ಥೋ ರಕ್ತವರ್ಣೋ ಅಗ್ನಿಬೀಜ ವಾಚ್ಯಃ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥಂ ಪಾಪ ಪುರುಷಂ ಅಗ್ನಿನಾ ನಿರ್ದಹತು, ಎಂದುಹೇಳಿ ಶ್ರೀಂ ರಂ ಶ್ರೀಂ ಎಂದು 12 ಸಲ ಜಪಿಸಿ ಪಾಪ ಪುರುಷನು ಸುಟ್ಟು ಹೋದನೆಂದು ಭಾವಿಸಿ ಎಡದ ಮೂಗಿನಿಂದ ಶ್ವಾಸಬಿಟ್ಟು ಆ ಬೂದಿಯನ್ನು ಹೊರಗೆ ಹಾಕಬೇಕು.

ನಂತರ ಶಿರಸ್ಸನ್ನು ಮುಟ್ಟಿ, ಶಿರಸಿ ವರ್ತುಲ ಮಂಡಲಮಧ್ಯಸ್ಥೋ ಶ್ವೇತವರ್ಣೋ ವರುಣಬೀಜವಾಚ್ಯಃ ಶ್ರೀವಾಸುದೇವೋ ಭಗವಾನ್ ಮಚ್ಛರೀರಂ ಅಮೃತವೃಷ್ಟ್ಯಾ ವರುಣೇನ ಆಪ್ಲಾವಯತು ಎಂದು ಹೇಳಿ ಶ್ರೀಂ ವಂ ಶ್ರೀಂ ಎಂದು 24 ಸಲ ಜಪಿಸಬೇಕು. ಶಿರಸ್ಸಿನಲ್ಲಿ ಕುಳಿತಿದ್ದ (ಭಗವಂತ) ನಾರಾಯಣನನ್ನು ಹೃತ್ಕಮಲಕ್ಕೆ ತಂದು ಹೃದಯದಲ್ಲಿ ಇರುವನೆಂದು ಭಾವಿಸಬೇಕು.

**ಪುಣ್ಯಪುರುಷ ಚಿಂತನಂ** – ಹೊಟ್ಟೆಯ ಬಲಭಾಗವನ್ನು ಮುಟ್ಟಿ– ಅಶ್ವಮೇಧ ಶಿರಸ್ಕಂಚ ಮಹಾದಾನಭುಜದ್ವಯಂ । ಸೋಮಪಾನ ಹೃದಾಯುಕ್ತಂ ಬ್ರಹ್ಮಚರ್ಯ ಕಟಿದ್ವಯಂ। ತತ್ಸಂಯೋಗ ಪದದ್ವಂದ್ವ ಸಾಂಗೋಪಾಂಗ ಶುಭತ್ರಯಂ। ಸರ್ವವ್ರತಾಂಗ ರೋಮಾಣಾಂ ಗುರುಸೇವಾದಿ ಲೋಚನಂ । ಸಿಂಹಾಸನೇ ಸಮಾಸೀನಂ ಸ್ವರ್ಣವರ್ಣಂ ಕಿರೀಟಿನಂ । ಗೀರ್ವಾಣ ನುತ ಪಾದಾಬ್ಜಂ ಪುಣ್ಯಂ ಹೃದಿ ವಿಭಾವಯೇತ್ ॥ ಎಂಬುದಾಗಿ ಹೇಳುತ್ತ ಪುಣ್ಯ ಪುರುಷನನ್ನು ಧ್ಯಾನಿಸಬೇಕು.

ಅನೇನ ಗುರುಮಂತ್ರ ಜಪೇನ ಅಸ್ಮತ್ ಪತ್ಯಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀವೆಂಕಟೇಶಃ ಪ್ರೀಯತಾಂ ಪ್ರೀತೋ ವರದೋ ಭವತು । ಶ್ರೀಕೃಷ್ಣಾರ್ಪಣಮಸ್ತು.

**ಶ್ರೀಕೃಷ್ಣಮಂತ್ರ**[3] : – ಶ್ರೀಂ ಕ್ಲೀಂ ಕೃಷ್ಣಾಯ ನಮಃ ಎಂದು ಮೂರು ಸಾರೆ ಹೇಳಿ ಪ್ರಾಣಾಯಾಮ ಮಾಡಬೇಕು.

**ಷಡಂಗನ್ಯಾಸ :**

1. ಶ್ರೀ ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ ।
2. ಶ್ರೀ ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ ।

---

3. ಗುರುಮಂತ್ರ, ಶ್ರೀಕೃಷ್ಣಮಂತ್ರ ಇವೆರಡನ್ನೂ ಗುರುಗಳಿಂದ, ಹಿರಿಯರಿಂದ ಉಪದೇಶ ತೆಗೆದುಕೊಂಡು ಮಾಡಬೇಕು.

3. ಶ್ರೀ ಪೂರ್ಣಪ್ರಭಾತ್ಮನೇ ಶಿಖಾಯೈ ವೌಷಟ್ ।
4. ಶ್ರೀ ಪೂರ್ಣಾನಂದಾತ್ಮನೇ ಕವಚಾಯ ಹುಂ ।
5. ಶ್ರೀ ಪೂರ್ಣತೇಜಾತ್ಮನೇ ನೇತ್ರಾಭ್ಯಾಂ ವೌಷಟ್ ।
6. ಶ್ರೀ ಪೂರ್ಣಶಕ್ತ್ಯಾತ್ಮನೇ ಅಸ್ತ್ರಾಯ ಫಟ್ । ಇತಿ ದಿಗ್ಬಂಧಃ ।.

ಅಸ್ಯ ಶ್ರೀಕೃಷ್ಣ ಷಡಕ್ಷರ ಮಹಾಮಂತ್ರಸ್ಯ ಬ್ರಹ್ಮಾಋಷಿಃ (ಶಿರಸಿ) ಗಾಯತ್ರೀ ಛಂದಃ (ಮುಖೇ) ಶ್ರೀಕೃಷ್ಣೋ ದೇವತಾ (ಹೃದಯೇ) ಶ್ರೀಕೃಷ್ಣ ಪ್ರೀತ್ಯರ್ಥೇ ಜಪೇ ವಿನಿಯೋಗಃ ॥

**ಅಥ ಧ್ಯಾನಂ** – ಈ ಧ್ಯಾನ ಶ್ಲೋಕ ಹೇಳಬೇಕು –

ಧ್ಯಾಯೇದ್ಧರಿನ್ಮಣಿನಿಭಂ ಜಗದೇಕ ವಂದ್ಯಂ
ಸೌಂದರ್ಯಸಾರಮರಿಶಂಖವರಾಭಯಾನಿ ।
ದೋರ್ಭಿರ್ದಧಾನಮಜಿತಂ ಸರಸಂ ಚ ಭೈಷ್ಮೀ
ಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥

**ಅಥ ಜಪಃ** – ಅಸ್ಮತ್ ಪತ್ಯಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಗೋಪಾಲಕೃಷ್ಣ ಪ್ರೇರಣಯಾ ಶ್ರೀಗೋಪಾಲಕೃಷ್ಣ ಪ್ರೀತ್ಯರ್ಥಂ ಶ್ರೀಕೃಷ್ಣಷಡಕ್ಷರ ಮಹಾಮಂತ್ರ ಜಪ ತರ್ಪಣಂ ಚ ಕರಿಷ್ಯೇ ॥

॥ ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ ॥ ಈ ಮಂತ್ರವನ್ನು 108 ಸಾರೆ ಜಪಿಸಬೇಕು. ಜಪದ ನಂತರ ಮತ್ತೆ ಷಡಂಗನ್ಯಾಸ, ಧ್ಯಾನಾದಿಗಳನ್ನು ಮಾಡಿಕೊಂಡು–

ಅನೇನ ಶ್ರೀಕೃಷ್ಣ ಷಡಕ್ಷರ ಮಹಾಮಂತ್ರ ಜಪೇನ ಅಸ್ಮತ್ ಪತ್ಯಂತರ್ಗತ ಶ್ರೀಗೋಪಾಲಕೃಷ್ಣಃ ಪ್ರೀಯತಾಂ ಎಂದು ಹೇಳಬೇಕು.(10 ಜಪಕ್ಕೆ ಒಂದರಂತೆ ಅರ್ಘ್ಯ ಕೊಡಬೇಕು.)

**ಅರ್ಘ್ಯಂ**–ಶ್ರೀಂ ಕ್ಲೀಂ ಕೃಷ್ಣಾಯ ನಮಃ ಶ್ರೀಂ॥ ಇತಿಅರ್ಘ್ಯಂ.

ಅಚ್ಯುತಾಯ ನಮಃ ಅನಂತಾಯ ನಮಃ , ಗೋವಿಂದಾಯ ನಮಃ ಹೇಳಬೇಕು. ಗೌರೀ ಪೂಜೆ ಮಾಡಬೇಕು. ನಂತರ ಶ್ರೀಮಧ್ವನಾಮ, ಕೇಶವನಾಮ ಇತ್ಯಾದಿಗಳನ್ನು ಹೇಳುತ್ತ ಅಡಿಗೆ ಮಾಡಿ ದೇವರಿಗೆ ನೈವೇದ್ಯಕ್ಕೆ ಇಡಬೇಕು.[4]

ನೈವೇದ್ಯ ಇತ್ಯಾದಿಗಳು ಆದಮೇಲೆ[5] ಪತಿಗೆ ಮಕ್ಕಳಿಗೆ ಊಟಕ್ಕೆ ಬಡಿಸಿ ತಾನು ಊಟ ಮಾಡಬೇಕು. ಶ್ರೀಹರಿಸ್ಮರಣೆ ನಿರಂತರ ಮಾಡುತ್ತಿರಬೇಕು.

****

---

4. ಅಡಿಗೆ ಮಾಡುವಾಗ ಈ ಅನುಸಂಧಾನ ಇರಬೇಕು.ಸೂರ್ಯ ನಾರಾಯಣ ಸಾರಥಿ ಆಗಲಿ, ಅಟ್ಟ ಅಡಿಗೆ ಅಕ್ಷಯವಾಗಲಿ.ಶ್ರೀಲಕ್ಷ್ಮೀನಾರಾಯಣನ ನೈವೇದ್ಯವಾಗಲಿ, ಲಕ್ಷಬ್ರಾಹ್ಮಣರ ಭೋಜನವಾಗಲಿ, ಶ್ರೀಲಕ್ಷ್ಮೀನಾರಾಯಣ ತೃಪ್ತನಾಗಲಿ, ಶ್ರೀಲಕ್ಷ್ಮೀನಾರಾಯಣನ ರಕ್ಷೆ ಇರಲಿ.

5. ತುಳಸೀ ಪೂಜೆ ಮಾಡಬೇಕು. (ಸಂಪ್ರದಾಯವಿದ್ದಂತೆ ಮಾಡಬೇಕು.)

| | | |
|---|---|---|
| 27) | The glory of great saint Sri Vadirajteerth | 15-00 |
| 28) | ಶ್ರೀಕೃಷ್ಣಸ್ತೋತ್ರ ಮಂಜರೀ (ಅಪೂರ್ವ ಸ್ತೋತ್ರ ಸಂಗ್ರಹ) | 30-00 |
| 29) | ಶ್ರೀವಾದಿರಾಜಪೂಜ್ಯಚರಣ ವಿರಚಿತ ಶ್ರೀಮದ್ ಭಾಗವತಾನುಕ್ರಮಣಿಕಾ ಕನ್ನಡಾನುವಾದ | 20-00 |
| 30) | ಕಾವ್ಯ ಶಾಸ್ತ್ರವಿನೋದ (ಎಸ್.ಎಮ್.ಎಸ್.ಓ.ಸಭಾ ಪ್ರಕಟಿತ) | 20-00 |
| 31) | ವಿವಾಹಿತರಿಗೆ ವಿಹಿತ ಉಪದೇಶ | 30-00 |
| 32) | ವೈದ್ಯಮೂರ್ತಿ ಶ್ರೀಧನ್ವಂತರಿ | 15-00 |
| 33) | ಶ್ರೀ ಋಷಿಪಂಚಮಿ ವ್ರತ, ಶ್ರೀವಿಷ್ಣು ಪಂಚಕ ವ್ರತ, ಶ್ರೀ ಭೀಷ್ಮ ಪಂಚಕ ವ್ರತ | 20-00 |
| 34) | ಶ್ರೀ ಅಧ್ಯಾತ್ಮಮಾಲಿಕಾ (ಕನ್ನಡಾನುವಾದ, ವಿವರಣೆ ಸಹಿತ) | 10-00 |
| 35) | ಸಪ್ತಾಹ ಕ್ರಮದಲ್ಲಿ ಶ್ರೀಮದ್ ಭಾಗವತ ಕಥಾಸಾರ ಸಂಗ್ರಹ (ದ್ವಿತೀಯ ಮುದ್ರಣ) | 40-00 |
| 36) | ಶ್ರಾದ್ಧಕರ್ಮ (ಶ್ರೀ ರಾಘವೇಂದ್ರ ದರ್ಶನಕೇಂದ್ರ, ಬೆಂಗಳೂರು ಪ್ರಕಟಿತ) (ದ್ವಿತೀಯ ಮುದ್ರಣ) | 80-00 |
| 37) | ಸೂರ್ಯಪುತ್ರ ಶನೈಶ್ಚರ | 10-00 |
| 38) | ದಾಸಸಾಹಿತ್ಯ ನಿತ್ಯಾಚರಣೆಗಳು (ವೈಜ್ಞಾನಿಕ ದೃಷ್ಟಿಯಲ್ಲಿ) | 15-00 |
| 39) | ವ್ಯಾಸ-ದಾಸ ವಾಣಿಯಲ್ಲಿ ದೈನಂದಿನ ಆಚರಣೆ | 20-00 |
| 40) | ಭಾರತೀಯ ಸಂಸ್ಕೃತಿಯಲ್ಲಿ ಗೋವು | 25-00 |
| 41) | ಶ್ರೀಮಂಗಲಾಷ್ಟಕಮಂಜರೀ | 15-00 |
| 42) | ಶ್ರೀ ದ್ವಾದಶಸ್ತೋತ್ರ-ಚಿಂತನ ಮಂಥನ | 20-00 |
| 43) | ಶ್ರೀಮದ್ ಭಾಗವತಸೂಕ್ತಿಸುಧಾನಿಧಿ (ಕನ್ನಡಾನುವಾದ ಸಹಿತ) | 20-00 |
| 44) | ಶ್ರೀಕರಾವಲಂಬನಸ್ತೋತ್ರಮಂಜರೀ | 20-00 |
| 45) | ಶ್ರೀಸುಮಧ್ವವಿಜಯ ಮಹಾಕಾವ್ಯ ಚಿಂತನ ಮಂಥನ | 25-00 |
| 46) | ಸ್ಮರಿಸು ಸಂತತ ಹರಿಯ (ಶ್ರೀ ಜಗನ್ನಾಥದಾಸರ ಒಂದು ಪದ್ಯದ ವಿವರಣೆ) | 15-00 |
| 47) | ಶ್ರೀವೈಕುಂಠವರ್ಣನೆ ಸಾರಸಂಗ್ರಹ | 20-00 |
| 48) | ಋಗ್ವೇದೀಯ ಶ್ರಾದ್ಧವಿಧಾನ (ಪಿಂಡಪ್ರದಾನ,ಸಂಕಲ್ಪ ಶ್ರಾದ್ಧಗಳ ವಿವರಣೆ ಸಹಿತ) | 25-00 |
| 49) | ಶ್ರೀ ಸತ್ಯಧರ್ಮತೀರ್ಥರು (ಚರಿತ್ರೆ,ಸ್ತೋತ್ರಗಳು) | 20-00 |
| 50) | ಗೋಪೀಚಂದನ, ಊರ್ಧ್ವಪುಂಡ್ರ,ಮುದ್ರಾಧಾರಣೆಗಳ ಅವಶ್ಯಕತೆ | 30-00 |
| 51) | ಧಾರ್ಮಿಕ ಆಚರಣೆಗಳ ಹಿನ್ನೆಲೆ (ಪ್ರಮಾಣ ಸಹಿತ) | 10-00 |
| 52) | ಶ್ರೀ ವೆಂಕಟೇಶಮಹಾತ್ಮೆ ಸಾರಸಂಗ್ರಹ (ನವರಾತ್ರಿ ಸಂಕಲ್ಪ ಸಹಿತ) | 15-00 |
| 53) | ಶ್ರೀ ಕಾಠಕೋಪನಿಷತ್ (ಒಂದು ಅಧ್ಯಯನ) | 30-00 |
| 54) | ಇತಿಹಾಸ ಪುರಾಣಗಳಲ್ಲಿ ಸ್ತ್ರೀಧರ್ಮಗಳು (ಸ್ತ್ರೀಜಪಕ್ರಮ ಸಹಿತ) | 15-00 |

## ಶ್ರೀಮದ್‌ಭಾಗವತದ ಕಿವಿಮಾತು

ಗೃಹಿಣಿಯಾದವಳು ಯಾವಾಗಲೂ ಪತಿಪರಾಯಣೆಯಾಗಿರಬೇಕು. ಪತಿಯನ್ನು ದೇವರಂತೆ ಗೌರವಿಸಬೇಕು. ಅವನ ಮಾತಿನಂತೆ ನಡೆಯಬೇಕು. ಪತಿಯ ಬಂಧುಗಳನ್ನು ಗೌರವಿಸಬೇಕು.

ಪತಿಯು ಪ್ರಸನ್ನನಾದಪಕ್ಷದಲ್ಲಿ ಪತ್ನಿಗೆ ಇಹಲೋಕದಲ್ಲಿಯಾಗಲೀ, ಪರಲೋಕದಲ್ಲಿಯಾಗಲೀ ಯಾವುದೇ ಕೋರಿಕೆಯ ವಸ್ತು ದುರ್ಲಭವಾಗುವದಿಲ್ಲ. ಅಂದರೆ ಅವಳು ಸುಲಭವಾಗಿ ಎಲ್ಲವನ್ನೂ ಹೊಂದುತ್ತಾಳೆ.

ಪತಿಯೇ ಸ್ತ್ರೀಯರಿಗೆ ಪರಮಾರಾಧ್ಯವಾದ ಇಷ್ಟದೇವರು ಎಂಬುದಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.

★★★★★